# ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ




# ದ.ರಾ. ಬೇಂದ್ರೆ ವಿರಚಿತ 'ತಲೆದಂಡ' ನಾಟಕ - ಒಂದು ಅಧ್ಯಯನ


**ಸಂಶೋಧನ ವಿದ್ಯಾರ್ಥಿ**
ರಮೇಶ. ಎಂ

**ಮಾರ್ಗದರ್ಶಕರು**
ಡಾ॥ ಪುಟ್ಟಸ್ವಾಮಿ ಕಲ್ಲುದೇವರಹಳ್ಳಿ ಎಂ.ಎ., ಪಿಎಚ್.ಡಿ
ಕನ್ನಡ ಪ್ರಾಧ್ಯಾಪಕರು, ಎಂ.ಇ.ಎಸ್. ಕಾಲೇಜು,
ಮಲ್ಲೇಶ್ವರಂ, ಬೆಂಗಳೂರು-೦೩







ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦೦೧೯
(... ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನ ಕೇಂದ್ರ)

954

# ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಅರ್ಪಿಸಿದ ನಿಬಂಧ



# ದ.ರಾ. ಬೇಂದ್ರೆ ವಿರಚಿತ 'ತಲೆದಂಡ' ನಾಟಕ - ಒಂದು ಅಧ್ಯಯನ


## ಸಂಶೋಧನ ವಿದ್ಯಾರ್ಥಿ
ರಮೇಶ. ಎಂ

## ಮಾರ್ಗದರ್ಶಕರು
ಡಾ॥ ಪುಟ್ಟಸ್ವಾಮಿ ಕಲ್ಲುದೇವರಹಳ್ಳಿ ಎಂ.ಎ., ಪಿಎಚ್.ಡಿ

ಕನ್ನಡ ಪ್ರಾಧ್ಯಾಪಕರು, ಎಂ.ಇ.ಎಸ್. ಕಾಲೇಜು,
ಮಲ್ಲೇಶ್ವರಂ, ಬೆಂಗಳೂರು-೦೩





ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦೦೧೯

(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನ ಕೇಂದ್ರ)

## ಮಾರ್ಗದರ್ಶಕರ ದೃಢೀಕರಣ ಪತ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ. ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರ, ಬೆಂಗಳೂರು–೧೯. ಈ ಮೂಲಕ ಹಂಪಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ೨೦೧೧–೧೨ನೇ ಸಾಲಿನ ಎಂ.ಫಿಲ್. ಪದವಿಗಾಗಿ ರಮೇಶ.ಎಂ. ರವರು ನನ್ನ ಮಾರ್ಗದರ್ಶನದಲ್ಲಿ – "ದ.ರಾ.ಬೇಂದ್ರೆ ವಿರಚಿತ 'ತಲೆದಂಡ' ನಾಟಕ–ಒಂದು ಅಧ್ಯಯನ" ಎಂಬ ನಿಬಂಧವನ್ನು ಸಿದ್ಧಪಡಿಸಿದ್ದಾರೆ.

ಈ ನಿಬಂಧವು ಇವರ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

(ಡಾ॥ ಪುಟ್ಟಸ್ವಾಮಿ ಕಲ್ಲುದೇವರಹಳ್ಳಿ)
ಮಾರ್ಗದರ್ಶಕರು

ಡಾ. ಪುಟ್ಟಸ್ವಾಮಿ ಕಲ್ಲು ದೇವರ ಹಳ್ಳಿ
ಕನ್ನಡ ವಿಭಾಗದ ಮುಖ್ಯಸ್ಥರು
ಎಂ.ಇ.ಎಸ್. ಕಾಲೇಜು
ಮಲ್ಲೇಶ್ವರಂ, ಬೆಂಗಳೂರು-560003

ದಿನಾಂಕ : ೨೫/೦೬/೨೦೧೨
ಸ್ಥಳ : ಬೆಂಗಳೂರು

# ಅಭ್ಯರ್ಥಿಯ ದೃಢೀಕರಣ ಪತ್ರ

ರಮೇಶ.ಎಂ. ಎಂಬ ನಾನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ. ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ, ಬೆಂಗಳೂರು-೧೯. ಈ ಮೂಲಕ ಹಂಪಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ೨೦೧೧-೧೨ನೇ ಸಾಲಿನ ಎಂ.ಫಿಲ್. ಪದವಿಗಾಗಿ "ದ.ರಾ.ಬೇಂದ್ರೆ ವಿರಚಿತ 'ತಲೆದಂಡ' ನಾಟಕ - ಒಂದು ಅಧ್ಯಯನ" ಎಂಬ ನಿಬಂಧವನ್ನು ಡಾ॥ಪುಟ್ಟಸ್ವಾಮಿ ಕಲ್ಲುದೇವರಹಳ್ಳಿಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

(ಎಂ. ರಮೇಶ)

ಸಂಶೋಧನ ವಿದ್ಯಾರ್ಥಿ

ದಿನಾಂಕ : ೨೫/೦೬/೨೦೧೨

ಸ್ಥಳ : ಬೆಂಗಳೂರು

# ಪರಿವಿಡಿ

# ಅಧ್ಯಾಯ–೧

## ಅಧ್ಯಯನದ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ

"ಕಾವ್ಯೇಷು ನಾಟಕಂ ರಮ್ಯಂ" ಎಂಬ ಸಂಸ್ಕೃತದ ಉಕ್ತಿಯಂತೆ ಕಾವ್ಯಗಳಲ್ಲೆಲ್ಲಾ ನಾಟಕವೇ ರಮ್ಯವಾದದ್ದು. ಪ್ರಾಚೀನ ಕಲೆಗಳಲ್ಲಿ ನಾಟಕವೇ ಪ್ರಮುಖವಾದುದು. ಜಗತ್ತಿನ ಎಲ್ಲಾ ದೇಶಗಳಲ್ಲಿ ನಾಟಕಕಲೆ ಹುಟ್ಟಿದ್ದು ದೇವತೆಗಳ ಪ್ರೀತ್ಯರ್ಥವಾಗಿ ಅಥವಾ ಭೂತ ಬೇತಾಳಗಳನ್ನು ತೃಪ್ತಿಪಡಿಸುವುದಕ್ಕಾಗಿ ನಡೆಯುವ ವ್ರತಾಚರಣೆಗಳಿಂದ.

ಭಾರತದಲ್ಲಿ ನಾಟಕಗಳ ಪರಂಪರೆ ಪ್ರಾರಂಭವಾಗುವುದೇ ಸಂಸ್ಕೃತ ಭಾಷೆಯಿಂದ. ಋಗ್ವೇದದ ಸಂವಾದಸೂಕ್ತಗಳೇ ಸಂಸ್ಕೃತ ನಾಟಕದ ಬೀಜಾಂಕುರಗಳೆಂದು ಕೆಲವು ವಿದ್ವಾಂಸರು ಊಹಿಸಿದ್ದಾರೆ.

ಕನ್ನಡ ಕಾವ್ಯ, ಶಾಸನಗಳಲ್ಲಿ ನಟ, ನಾಟಕ, ನಾಟಕಶಾಲೆ ಎಂಬ ಮಾತುಗಳು ಒಂಭತ್ತನೇ ಶತಮಾನದಿಂದಲೂ ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆಯಾದರೂ ಯಕ್ಷಗಾನ ಮತ್ತು ಬಯಲಾಟಗಳೇ ಕನ್ನಡದ ಅತ್ಯಂತ ಪ್ರಾಚೀನ ನಾಟಕಗಳೆಂದು ತರ್ಕಸಿದ್ದವಾಗಿದೆ. ಸಂಸ್ಕೃತದ ಮಾದರಿಯಲ್ಲಿ ರಚಿತವಾದ ನಾಟಕಗಳಲ್ಲಿ ಸಿಕ್ಕಿರುವ ಮೊದಲ ಕನ್ನಡದ ನಾಟಕವೆಂದು ಗುರುತಿಸಬಹುದಾದದ್ದು ಕ್ರಿ. ಶ. ೧೭೦೦ ರಲ್ಲಿ ಮೈಸೂರು ಅರಸ ಚಿಕ್ಕದೇವರಾಜ ಒಡೆಯರ ಆಸ್ಥಾನ ಕವಿಯಾದ ಸಿಂಗಾರಾರ್ಯನ 'ಮಿತ್ರವಿಂದಾ ಗೋವಿಂದಾ'ವಾಗಿದ್ದು ಈ ನಾಟಕವು ರಂಗದಮೇಲೆ ಪ್ರದರ್ಶಿಸಲ್ಪಟ್ಟಿತ್ತು ಎಂಬ ಬಗ್ಗೆ ಯಾವ ಪುರಾವೆಯೂ ದೊರೆತಿಲ್ಲ.

ಕಥೆಯೊಂದು ಬರಹಗಾರನ ಮನಃಪಟಲದಲ್ಲಿ ಮೂಡಿ ನಾಟಕ ಕೃತಿಯಾಗಿ ಬರಹರೂಪದಲ್ಲಿ ಕಾಣಿಸಿಕೊಂಡ ಮೇಲೆ ಅದನ್ನು ರಂಗವೇದಿಕೆಯಲ್ಲಿ ಪ್ರತಿಭಾವಂತ ಕಲಾವಿದರು ಪ್ರದರ್ಶನನೀಡಿದಾಗ ಅದರ ಸಾರ್ಥಕತೆಯನ್ನು ಕಾಣಬಹುದು. ಕನ್ನಡ ರಂಗಭೂಮಿಯ ವಿಕಾಸ ಮಾರ್ಗದಲ್ಲಿ ಜನಪದ ರಂಗಭೂಮಿ, ಹವ್ಯಾಸಿ ರಂಗಭೂಮಿ, ಮತ್ತು ವೃತ್ತಿ ರಂಗಭೂಮಿ ಎಂಬ ಮೂರು ಪ್ರತ್ಯೇಕವಾದ ಪ್ರಮುಖ ಪರಂಪರೆಗಳನ್ನು ಗುರುತಿಸಬಹುದು.

ನವೋದಯದನಂತರದಲ್ಲಿ ರಚನೆಯಾದ ನಾಟಕಗಳು ರಂಗಭೂಮಿಯ ಬೆಳವಣಿಗೆಯ ದೃಷ್ಟಿಯಿಂದ ಚಾರಿತ್ರಿಕವಾಗಿ ಮಹತ್ವದ ಘಟ್ಟವಾಗಿದ್ದು, ಈ ಕಾಲಘಟ್ಟವನ್ನು ಕನ್ನಡರಂಗಭೂಮಿಯ ಸಂಕ್ರಮಣಕಾಲ ಎನ್ನಬಹುದು. ಒಂದು ನಾಟಕ ಪರಿಣಾಮಕಾರಿಯಾಗಲು ನಾಟಕಕಾರನಷ್ಟೆ ನಿರ್ದೇಶಕನೂ ಸಹ ಅತಿ ಮುಖ್ಯ. ಕಾವ್ಯ ಕಥೆ ಕಾದಂಬರಿಗಳಲ್ಲಿ ಅಂತರ್ಗತವಾಗಿರುವ ನಾಟಕೀಯ ಗುಣಗಳನ್ನು ಬಳಸಿಕೊಂಡು

ನಾಟಕಕಾರ, ನಿರ್ದೇಶಕನು ಅದನ್ನು ಯಶಸ್ವಿ ನಾಟಕವಾಗಿ ಪ್ರಯೋಗಿಸಬಲ್ಲ ಎಂಬ ಅರಿವು ನವೋದಯದ ನಂತರದಲ್ಲಿ ಗೋಚರವಾಯಿತು. ನಾಟಕ ಮತ್ತು ರಂಗ ಕೃತಿಗಳ ನಡುವೆ ಇರುವ ನಿಕಟಸಂಬಂಧವನ್ನು ಚರ್ಚಿಸಿ ನಾಟಕ ಸಾಹಿತ್ಯಕ್ಕೆ ರಂಗ ಸಾಧ್ಯತೆಯನ್ನು ಸಮ್ಮಿಲನಗೊಳಿಸಲಾಯಿತು.

ಪ್ರಸ್ತುತ ಸಂಪ್ರಬಂಧದಲ್ಲಿ ಕನ್ನಡದ ವರಕವಿ ದ.ರಾ. ಬೇಂದ್ರೆಯವರು ವೃತ್ತಿರಂಗ ನಾಟಕವಾಗಿಯೇ ಬರೆದಿರುವ 'ತಲೆದಂಡ' ನಾಟಕವನ್ನು ಕುರಿತು ಅಧ್ಯಯನ ಮಾಡಬೇಕೆಂಬುದು ನನ್ನ ಉದ್ದೇಶವಾಗಿದೆ.

ಭಕ್ತಿಭಂಡಾರಿ ಬಸವಣ್ಣನ ಜೀವನೋದ್ದೇಶಗಳನ್ನು ಬಿಂಬಿಸುವ ಹಲವು ನಾಟಕಗಳು ಕನ್ನಡದಲ್ಲಿ ರಚನೆಯಾಗಿದ್ದು,ಇವುಗಳಲ್ಲಿ ಬಹುತೇಕ ನಾಟಕಗಳು ಬಸವಣ್ಣನನ್ನು ಒಬ್ಬ ವಿಚಾರವಾದಿ, ಸಾಮಾಜಿಕ, ಧಾರ್ಮಿಕ ಸುಧಾರಣಾವಾದಿಯಂತೆ ಬಿಂಬಿಸಿವೆ. ಆದರೆ ಬೇಂದ್ರೆ ವಿರಚಿತ 'ತಲೆದಂಡ' ನಾಟಕದ ಬಸವಣ್ಣನು ಒಬ್ಬ ಮಹಾನ್ ಪವಾಡ ಪುರುಷನಂತೆ, ಕಾರಣೀಪುರುಷನಂತೆ ಕಂಡು ಬರುತ್ತಾನೆ. ಬಿಜ್ಜಳರಾಜನ ಆಸ್ಥಾನದಲ್ಲಿ ಮಂತ್ರಿಯಾಗಿದ್ದರೂ ಸಹ ಶಿವನಿಗಲ್ಲದೆ ಮತ್ತ್ಯಾರಿಗೂ ತಲೆಬಾಗುವುದಿಲ್ಲವೆಂದು ಘೋಷಣೆ ಮಾಡಿ ಮಂತ್ರಿ ಪದವಿಯನ್ನು ತ್ಯಜಿಸಿ ಶಿವನಿಗೆ ತಲೆದಂಡ ಅರ್ಪಿಸುವುದು ನಾಟಕದ ಕಥಾವಸ್ತು. ಈ ಸಂಪ್ರಬಂಧದಲ್ಲಿ ಹರಿಹರನ 'ಬಸವರಾಜದೇವರ ರಗಳೆ' ಹಾಗೂ ಬಸವಣ್ಣ–ಬಿಜ್ಜಳರನ್ನು ಕೇಂದ್ರವಾಗಿಟ್ಟುಕೊಂಡು ರಚನೆಯಾಗಿರುವ ಕನ್ನಡದ ಇತರೆ ನಾಟಕಗಳ ಹಿನ್ನೆಲೆಯಲ್ಲಿ ಬೇಂದ್ರೆ ವಿರಚಿತ 'ತಲೆದಂಡ' ನಾಟಕವನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಬೇಕೆಂಬುದಾಗಿದೆ.

ಹನ್ನೆರಡನೆಯ ಶತಮಾನದ ರಾಜಕೀಯ, ಸಾಮಾಜಿಕ, ಧಾರ್ಮಿಕ ಆಗುಹೋಗುಗಳ ಹಿನ್ನೆಲೆಯಲ್ಲಿ ಬಿಜ್ಜಳ, ಬಸವಣ್ಣನನ್ನು ಕೇಂದ್ರವಾಗಿರಿಸಿಕೊಂಡು ಕನ್ನಡದಲ್ಲಿ ಹಲವು ನಾಟಕಗಳು ರಚನೆಯಾಗಿವೆ. ಕಥಾವಸ್ತು ಒಂದೇ ಆದರೂ ಸಹ ಇವೆಲ್ಲಕ್ಕಿಂತ ಭಿನ್ನವಾಗಿ ಬಸವಣ್ಣನ ಚರಿತ್ರೆ ಹಾಗೂ ಚಾರಿತ್ರ್ಯಕ್ಕೆ ಕಾರ್ಯಕಾರಣ ಸಂಬಂಧ ಜೋಡಿಸಿ ಬಸವಣ್ಣನ ಘನವ್ಯಕ್ತಿತ್ವವನ್ನು ಕೇಂದ್ರವಾಗಿರಿಸಿಕೊಂಡು ದ.ರಾ.ಬೇಂದ್ರೆಯವರು ನಲವತ್ತರ ದಶಕದಲ್ಲಿಯೇ 'ತಲೆದಂಡ' ಎಂಬ ನಾಟಕವನ್ನು ಬರೆದಿದ್ದರು. ಆದರೆ ಅರವತ್ತೇಳು ವರುಷಗಳ ನಂತರ ಈ ನಾಟಕದ ಹಸ್ತಪ್ರತಿ ದೊರೆತಿದ್ದು, ಈ ನಾಟಕದಲ್ಲಿ ಪುರಾಣ ಮತ್ತು ಇತಿಹಾಸದ ವಸ್ತುವನ್ನು ಬಳಸಿಕೊಂಡು ಬಸವಣ್ಣನ ಜೀವನೋದ್ದೇಶಗಳನ್ನು ಬಿಂಬಿಸುವ

ಪ್ರಯತ್ನ ಅನನ್ಯವಾಗಿ ಮೂಡಿಬಂದಿದೆ. ೧೩ನೇ ಶತಮಾನದ ಹರಿಹರ ಕವಿಯ 'ಬಸವರಾಜದೇವರ ರಗಳೆ' ಯನ್ನು ಆಕರವಾಗಿರಿಸಿಕೊಂಡು ರಚನೆಯಾಗಿರುವ ಈ ವೃತ್ತಿರಂಗಕೃತಿಯನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

ಪಾಶ್ಚಾತ್ಯ ಹಾಗೂ ಭಾರತೀಯ ರಂಗಭೂಮಿಯ ವಿಕಾಸ, ವಿಶೇಷವಾಗಿ ಕನ್ನಡ ರಂಗಭೂಮಿಯ ಪರಂಪರೆಯಪರಿಚಯ, ವರಕವಿ ದ.ರಾ.ಬೇಂದ್ರೆಯವರ ಸಾಹಿತ್ಯಿಕ ಕೊಡುಗೆಗಳು, ಹರಿಹರ ಕವಿಯ 'ಬಸವರಾಜ ದೇವರ ರಗಳೆ'ಯ ಕಥಾಸಾರ, ಪಿ. ಲಂಕೇಶ, ಹೆಚ್.ಎಸ್. ಶಿವಪ್ರಕಾಶ, ಗಿರೀಶ್ ಕಾರ್ನಾಡ್ ಮತ್ತು ಚಂದ್ರಶೇಖರ ಕಂಬಾರರು ಬಸವಣ್ಣ–ಬಿಜ್ಜಳರನ್ನುಕೇಂದ್ರವಾಗಿರಿಸಿಕೊಂಡು ರಚಿಸಿರುವ ನಾಟಕಗಳನ್ನು ಇಲ್ಲಿ ಪರಿಚಯಮಾಡಿಕೊಡಲಾಗಿದೆ.

ಭರತಮುನಿಯ 'ನಾಟ್ಯಶಾಸ್ತ್ರ'ದ–ಮುಖ, ಪ್ರತಿಮುಖ, ಗರ್ಭ, ಅವಮರ್ಶ ಮತ್ತು ನಿರ್ವಹಣ ಎಂಬ ಪಂಚಸಂಧಿಗಳ ಹಾಗೂ ಕನ್ನಡದ ಪ್ರಥಮ ಸಾಮಾಜಿಕ ಸಂಘರ್ಷ ಕಾವ್ಯಾವಾದ ಹರಿಹರ ಕವಿಯ ರಗಳೆಯ ಹಿನ್ನೆಲೆಯಲ್ಲಿ ಬಸವಣ್ಣನವರ ಅವತಾರಿ ವ್ಯಕ್ತಿತ್ವದ, ಆತ್ಮಗುಣದ ಶ್ರೇಷ್ಠತೆಯನ್ನು ವಿಮರ್ಶಾತ್ಮಕವಾಗಿ ಅವಲೋಕಿಸುವುದು ಈ ಸಂಪ್ರಬಂಧದ ಸ್ವರೂಪ ಮತ್ತು ವ್ಯಾಪ್ತಿಯಾಗಿರುತ್ತದೆ.

# ಅಧ್ಯಾಯ-೨

# ರಂಗ ವಿಕಾಸ ಹಿನ್ನೋಟ

೧. ಪಾಶ್ಚಾತ್ಯ ರಂಗಭೂಮಿ

೨. ಭಾರತೀಯ ರಂಗಭೂಮಿ

೩. ಕನ್ನಡ ರಂಗಭೂಮಿ

* ಜನಪದ ರಂಗಭೂಮಿ
* ವೃತ್ತಿ ರಂಗಭೂಮಿ
* ಹವ್ಯಾಸಿ ರಂಗಭೂಮಿ
* ಇದುವರೆಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ-೨

## ರಂಗವಿಕಾಸ- ಹಿನ್ನೋಟ

ಜಗತ್ತಿನ ಅತ್ಯಂತ ಪ್ರಾಚೀನ ಕಲೆಗಳಲ್ಲಿ ನಾಟಕವು ಒಂದು. ಸಾಹಿತ್ಯ, ಸಂಗೀತ, ನೃತ್ಯ, ಅಭಿನಯ, ಶಿಲ್ಪಗಳ ಸಮನ್ವಯ ಎನಿಸಿದ ನಾಟಕವು ದೃಶ್ಯಕಾವ್ಯವೆಂದು ಜನಜನಿತವಾಗಿದೆ. 'ಕಾವ್ಯೇಷು ನಾಟಕಂ ರಮ್ಯಂ' ಎಂಬ ಉಕ್ತಿಯಂತೆ ಕಾವ್ಯ ಪ್ರಕಾರಗಳಲ್ಲಿ ನಾಟಕವೇ ಅತ್ಯಂತ ರಮ್ಯವಾದುದು. ಪ್ರಾಚೀನ ಭಾರತೀಯರ ನಂಬಿಕೆಯಂತೆ ಸಾಹಿತ್ಯದ ಅಂತಿಮ ವಿಜಯವೇ ನಾಟಕ. ಯಾವುದೇ ದೇಶದ ರಂಗಭೂಮಿ ಅಲ್ಲಿನ ಧಾರ್ಮಿಕ ಪರಂಪರೆಯ ಅಂಗವಾಗಿ ಹುಟ್ಟಿ ಸಾಮಾಜಿಕವಾಗಿ ಬೆಳೆದಿದೆ ಎಂಬುದು ಸ್ಪಷ್ಟ ವಿಚಾರ. ಇಂದು ಬೃಹದಾಕಾರವಾಗಿ ಬೆಳೆದಿರುವ ಪಾಶ್ಚಾತ್ಯ ರಂಗಭೂಮಿಯು ಸಹ ಇದಕ್ಕೆ ಹೊರತಲ್ಲ.

**ಪಾಶ್ಚಾತ್ಯ ರಂಗಭೂಮಿ:**

"ಪಾಶ್ಚಾತ್ಯ ರಂಗಭೂಮಿ ಅತ್ಯಂತ ಪ್ರಾಚೀನವಾದದ್ದು. ನಮಗೆ ನಿಶ್ಚಿತವಾಗಿ ತಿಳಿದುಬಂದಿರುವಂತೆ ವಸ್ತು, ಸಂಭಾಷಣೆ, ಪಾತ್ರರಚನೆ, ಹಾಡು, ಕುಣಿತ ಎಲ್ಲವನ್ನೂ ಮೈಗೂಡಿಸಿಕೊಂಡಿದ್ದ ಸಮಗ್ರ ರಂಗಭೂಮಿ ಪ್ರಪ್ರಥಮವಾಗಿ ಕ್ರಿ.ಪೂ. ೫ನೆಯ ಶತಮಾನದಲ್ಲಿ ಗ್ರೀಸ್ ದೇಶದ ಕ್ರಿಯಾವಿಧಿಗಳ ಅಂಗವಾಗಿ ಜನ್ಮತಾಳಿತು. ಡಯೋನೀಸಿಸ್ ದೇವತೆಯ ಪವಿತ್ರಸ್ಥಾನದ ಸುತ್ತಲೂ ಅರ್ಧಚಂದ್ರಾಕಾರದಲ್ಲಿ ಕಟ್ಟಿದ ಬಯಲುರಂಗಸ್ಥಳದಲ್ಲಿ ನಾಟಕಾಭಿನಯ ಪ್ರಾರಂಭವಾಯಿತು."೧

ಪಾಶ್ಚಾತ್ಯ ನಾಗರೀಕತೆಯ ತಲಕಾವೇರಿಯಾದ ಗ್ರೀಕ್‌ಸಂಸ್ಕೃತಿಯ ಹೆಮ್ಮೆಯ ಕೊಡುಗೆಯೆನಿಸಿದ ರುದ್ರನಾಟಕಗಳು ಅಲ್ಲಿನ ಧಾರ್ಮಿಕ ಆಚರಣೆಗಳಿಂದ ಪ್ರೇರಿತವಾಗಿ ಬೆಳೆದವು. ಕೃಷಿಯಸಮೃದ್ಧಿಗಾಗಿ ಪ್ರಾರ್ಥನೆ, ನಾಡಿಗಾಗಿಮಡಿದ ವೀರರಬಗೆಗೆ ಧನ್ಯತಾಭಾವ ಈ ಪ್ರೇರಣೆಯ ಹಿಂದಿದೆ.

ಆಫ್ರಿಕಾ, ನ್ಯೂಗಿನಿ, ಸಿಲೋನ್, ಟಿಬೆಟ್, ಬ್ರಿಟನ್, ಕೊಲಂಬಿಯಾ ದೇಶಗಳಲ್ಲಿ ಆದಿವಾಸಿಗಳು ಪ್ರಾಣಿಗಳ ಮುಖವಾಡ ಧರಿಸಿ ಪ್ರಾಣಿಯಂತೆ ನಟಿಸಿ ಕುಣಿದರೆ ತಮಗೆ ಆ ಪ್ರಾಣಿಯ ಶಕ್ತಿ ಆವಾಹನೆಯಾಗುತ್ತದೆ ಎಂದು ನಂಬಿದ್ದರು. ಕ್ರೈಸ್ತ ಮತದ ಪ್ರಚಾರದ ಉದ್ದೇಶ ಇಂಗ್ಲೀಷ್ ನಾಟಕಗಳ ಹುಟ್ಟಿಗೆ ಕಾರಣವಾದರೆ, ಫ್ರೆಂಚ್, ಚೀನಾರಂಗಭೂಮಿಯೂ ಸಹ ಪ್ರಾಚೀನ ಧಾರ್ಮಿಕಆರಾಧನೆಗಳ ಅಂಗವಾಗಿಯೇ ಹುಟ್ಟಿದವು. ಆನಂತರ ಮನೋರಂಜನೆಯ ಪ್ರಮುಖ ಮಾಧ್ಯಮವಾಗಿ ಬೆಳೆದ ಪಾಶ್ಚಾತ್ಯ ರಂಗಭೂಮಿಯು ಮಹಾಯುದ್ಧದ ನಂತರ ಉಂಟಾದ ಭಯ, ಅನುಮಾನ, ಕೈಗಾರಿಕಾ ಕ್ರಾಂತಿ ಮತ್ತು

---

೧. ಎನ್. ಎಸ್. ವೆಂಕಟರಾಮ್ ರಂಗಭೂಮಿ , ಪುಟ ೧೧

ವೈಜ್ಞಾನಿಕ ಪ್ರಗತಿಯ ಪರಿಣಾಮವಾಗಿ ನಾಟಕ ರಚನೆಯ ರೂಪ, ಶೈಲಿಗಳಲ್ಲೂ ವೈವಿಧ್ಯತೆ ಮೂಡಿ ಬಂದಿತು ಈ ಮಧ್ಯೆ ರಂಗಭೂಮಿಯು 'ಕಲಾ ರಂಗಭೂಮಿ' ಹಾಗೂ 'ವೃತ್ತಿ ರಂಗಭೂಮಿ'ಯಾಗಿ ಎರಡು ಕವಲುಗಳಾಗಿ ರೂಪ ತಳೆದವು.

**ಭಾರತೀಯ ರಂಗಭೂಮಿ:**

ನಮ್ಮ ಭಾರತೀಯ ರಂಗಭೂಮಿಯು ಸಹ ಎಲ್ಲ ದೇಶಗಳಂತೆ ಆದಿವಾಸಿಗಳು ದೇವತೆಗಳ ಒಲಿಸಿಕೊಳ್ಳಲು ಮುಖವಾಡ ಧರಿಸಿ ನಟಿಸುವ, ಕುಣಿಯುವ ಆಚರಣೆಗಳಿಂದಲೇ ಪ್ರಾರಂಭವಾಯಿತು. ಆದರೆ ಶಿಷ್ಟ ನಾಟಕಪರಂಪರೆ ಪ್ರಾರಂಭವಾಗುವುದು ಸಂಸ್ಕೃತ ಭಾಷೆಯಿಂದ, ಋಗ್ವೇದ ಸಂವಾದ ಸೂಕ್ತಗಳೇ ಸಂಸ್ಕೃತ ನಾಟಕದ ಬೀಜಾಂಕುರಗಳೆಂದು ಕೆಲವು ವಿದ್ವಾಂಸರು ಊಹಿಸಿದ್ದಾರೆ. ನಾಟ್ಯಶಾಸ್ತ್ರದ ಕರ್ತೃ ಭರತನು ಹೇಳಿರುವಂತೆ ನಾಟ್ಯ ಎಂಬುದು ವೇದಗಳಲ್ಲಿಲ್ಲದಿದ್ದ, ವೈದಿಕ ಕಾಲದಲ್ಲಿಲ್ಲದಿದ್ದ, ಒಂದು ಹೊಸ ವಿನೋದ ಎಂದು ಗೊತ್ತಾಗುತ್ತದೆ. ಇದಕ್ಕೆ ದ್ರಾವಿಡರ ಸ್ವತಂತ್ರ ರೀತಿಯ ಛಂದಸ್ಸು, ಕುಣಿತಗಳು ಕಾರಣವಿರಬೇಕೆಂದು ಭರತಮುನಿಯು ಊಹಿಸುತ್ತಾನೆ.

ನಾಟಕದ ಬಗ್ಗೆ ನಮಗೆ ದೊರೆತಿರುವ ಅತ್ಯಂತ ಪ್ರಾಚೀನ ಲಕ್ಷಣ ಗ್ರಂಥವಾದ ಭರತನ ನಾಟ್ಯಶಾಸ್ತ್ರದ ನಂತರ ನಾಟಕವನ್ನು ಕುರಿತು ಉಲ್ಲೇಖಿಸುವ ಮತ್ತೊಂದು ಪ್ರಮುಖ ಕೃತಿ ಕ್ರಿ.ಶ. ೩ನೆಯ ಶತಮಾನದ್ದೆಂದು ಭಾವಿಸಲಾದ 'ಹರಿವಂಶ'. ಈ ಗ್ರಂಥದಲ್ಲಿ 'ಜಗದ ನಾಟಕ ಸೂತ್ರಧಾರ'ನೆನಿಸಿದ ಶ್ರೀಕೃಷ್ಣನ ಜೀವನ ವೃತ್ತಾಂತವನ್ನು ನಿರೂಪಿಸುತ್ತಾ 'ನಾಟ್ಯವನ್ನು ನರ್ತಿಸಿದ' ಎಂದು ವರ್ಣಿಸಲಾಗಿದೆ. ಇದರಿಂದ ಆ ಕಾಲದಲ್ಲಿ ನಾಟಕವನ್ನು ನರ್ತಿಸುವ ಮೂಲಕ ಅಭಿನಯಿಸುತ್ತಿದ್ದರು ಎಂದು ತಿಳಿದುಬರುತ್ತದೆ.

ಭಾರತವನ್ನು ಆಳಿದ ಬಹುತೇಕ ರಾಜಮನೆತನಗಳು ಕಲೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದವು. ಈ ಕಾಲದಲ್ಲಿ ರಾಮಾಯಣ, ಮಹಾಭಾರತವನ್ನಾಧರಿಸಿದ ಹಲವು ನಾಟಕಗಳು ಅಭಿನಯಿಸಲ್ಪಟ್ಟವು. ರಾಜಾಸ್ಥಾನ, ದೇವಾಲಯಗಳೇ ರಂಗಮಂದಿರಗಳಾಗಿದ್ದವು. ಬ್ರಿಟೀಷರ ಕಾಲದಲ್ಲಿ ಭಾರತೀಯ ರಂಗಭೂಮಿಯು ಹಲವು ಸ್ಥಿತ್ಯಂತರಕ್ಕೆ ಒಳಗಾಯಿತು. ಅವರು ಭಾರತೀಯ ರಂಗಭೂಮಿಗೆ ಯೂರೋಪಿನ ರಂಗಪದ್ಧತಿಯ ಭೂಮಿಕೆಯನ್ನೊದಗಿಸಿದರು. ೧೮೭೨ನೆಯ ಇಸವಿಯಲ್ಲಿ ಕಲ್ಕತ್ತಾ ನಗರದಲ್ಲಿ ವೃತ್ತಿ ಕಲಾವಿದರ ತಂಡದ 'ನ್ಯಾಷನಲ್ ಥಿಯೇಟರ್' ಪ್ರಾರಂಭವಾಯಿತು. ನಂತರ ಅದನ್ನೇ ಮಾದರಿಯಾಗಿಟ್ಟುಕೊಂಡು 'ದಿ ಸ್ಟಾರ್' 'ದಿ ಮಿನರ್ವ' ಮೊದಲಾದ ನಾಟಕ ಕಂಪನಿಗಳೂ ಹುಟ್ಟಿಕೊಂಡವು. ೧೯೩೩ರ ವೇಳೆಗೆ ಕಾಲಧರ್ಮಕ್ಕೆ ಅನುಗುಣವಾಗಿ ಹೊಂದಿಕೊಳ್ಳಲು ಆಗದೆ ಆರ್ಥಿಕ ಮುಗ್ಗಟಿಗೆ ಸಿಲುಕಿ ಈ ಕಂಪನಿಗಳು ಅವಸಾನ ಹೊಂದಿದವು.

# ಕನ್ನಡ ರಂಗಭೂಮಿ

ಭಾರತೀಯ ಪರಿಸರದಲ್ಲಿ ಯಾವುದೇ ಒಂದು ಕಲೆಯ ಮೂಲ ಅವುಗಳ ಬೆಳವಣಿಗೆಯನ್ನು ಕುರಿತು ವಿಚಾರ ವಿಮರ್ಶೆಗೆ ತೊಡಗಿದಾಗ ನಮಗೆ ಎದುರಾಗುವುದು ಧರ್ಮ ಹಾಗೂ ದೇವರು. ಹಾಗೆ ನೋಡಿದರೆ ಜಗತ್ತಿನ ಎಲ್ಲಾ ದೇಶಗಳಲ್ಲಿಯೂ 'ನಾಟಕ ಕಲೆ' ಹುಟ್ಟಿದ್ದು ದೇವತೆಗಳ ಪ್ರೀತ್ಯರ್ಥಕ್ಕಾಗಿ ಅಥವಾ ಭೂತ ಬೇತಾಳಗಳನ್ನು ತೃಪ್ತಿ ಪಡಿಸುವುದಕ್ಕಾಗಿ ನಡೆಸುವ ವ್ರತಾಚರಣೆಗಳಿಂದ ಎಂಬುದು ಸ್ಪಷ್ಟ. ಅಂದರೆ "ಸಾವಿನ ಮೇಲೆ ಬದುಕಿನ ವಿಜಯದ ಫಲಪ್ರದ ಶಾಸ್ತ್ರ ವಿಧಿಗಳ ಮೃತ್ಯುಕ್ರಿಯೆಗಳ ಧರ್ಮವಿಧಿಗಳಲ್ಲಿ ನಾಟಕ ಹುಟ್ಟಿತು."[೨] ಎಂದಾಗುತ್ತದೆ.

ಕನ್ನಡ ಸಾಹಿತ್ಯಕ್ಕೆ ಸುಮಾರು ೧೫೦೦ ವರ್ಷಗಳ ಇತಿಹಾಸವಿದ್ದರೂ ಸಹ ನಾಟಕ ಸಾಹಿತ್ಯವು ಒಂದು ಪ್ರಕಾರವಾಗಿ ಹೊರ ಹೊಮ್ಮಿದ್ದು ಇತ್ತೀಚಿನ ಶತಮಾನಗಳಲ್ಲಿ. ಲಿಖಿತ ನಾಟಕ ಕೃತಿಗಳಲ್ಲಿ ನಮಗೆ ದೊರೆತಿರುವ ಮೊದಲ ನಾಟಕ ಕ್ರಿ.ಶ. ೧೬೮೦ ರದ್ದೆಂದು ಹೇಳಲಾದ, 'ಮಿತ್ರವಿಂದಾಗೋವಿಂದಾ.' ಇದನ್ನು ಬರೆದ ಸಿಂಗರಾರ್ಯನು ಚಿಕ್ಕದೇವರಾಜ ಒಡೆಯರ ಆಸ್ಥಾನ ಕವಿ. "ಮಿತ್ರವಿಂದಾಗೋವಿಂದಾ ನಾಟಕ ಕನ್ನಡದ ಮೊದಲ ನಾಟಕವೆಂದು ಮಾನ್ಯತೆ ಪಡೆದಿದ್ದರೂ ರಂಗದ ಮೇಲೆ ಪ್ರದರ್ಶಿಸಲ್ಪಟ್ಟಿತ್ತೇ ಎಂಬ ಬಗ್ಗೆ ಯಾವ ಪುರಾವೆಯೂ ದೊರೆತಿಲ್ಲ."[೩] ಶ್ರೀಹರ್ಷನ ಸಂಸ್ಕೃತ ನಾಟಕ 'ರತ್ನಾವಳಿ'ಯ ರೂಪಾಂತರವಾದ ಈ ನಾಟಕವು ರಾಜನನ್ನು ಅವನ ಪ್ರಣಯ ಜೀವನವನ್ನು ಪ್ರಶಂಸಿಸುವುದಕ್ಕಾಗಿ ಬರೆದ ನಾಟಕವಾಗಿದೆ.

"ಸಂಸ್ಕೃತದ ಮಾದರಿಯಲ್ಲಿ ರಚಿತವಾದ ನಾಟಕಗಳಲ್ಲಿ ಸಿಕ್ಕಿರುವ ಮೊದಲ ನಾಟಕವೆಂದು ಸಿಂಗಾರಾರ್ಯನ 'ಮಿತ್ರವಿಂದಾಗೋವಿಂದಾ'ವನ್ನು ಗುರುತಿಸಬಹುದೇ ಹೊರತು ಕನ್ನಡದ ಪ್ರಥಮ ನಾಟಕವೆಂದಲ್ಲ. ಏಕೆಂದರೆ ಅದಕ್ಕಿಂತಲೂ ಮುಂಚಿತವಾಗಿ ರೂಪುಗೊಂಡಿರಲೇಬೇಕಾದ ಯಕ್ಷಗಾನ ಆಟಗಳು ನಮ್ಮ ಪಾಲಿನ ತೀರ ಮೊದಲಿನ ನಾಟಕಗಳೆಂದೇ ಹೇಳಬೇಕು."[೪] ಎನ್ನುವ ಮಾತಿನಲ್ಲಿ ಅರ್ಥವಿಲ್ಲದೆ ಇಲ್ಲ. ಇದಕ್ಕೆ ಪುಷ್ಟಿ ಎಂಬಂತೆ "ಶಿವರಾಮ ಕಾರಂತರಿಗೆ ದೊರಕಿರುವ ಬಯಲಾಟದ ಅತ್ಯಂತ ಪ್ರಾಚೀನ ಕೃತಿಯ ಕಾಲವೇ ಕ್ರಿ.ಶ. ೧೫೦೪. ಅದರ ಕರ್ತೃ ಆಜಪುರದ ವಿಷ್ಣು ವಾರಂಬಳ್ಳಿ ಎಂಬುವರು. ಅಲ್ಲದೆ ಕ್ರಿ.ಶ. ೧೬೦೦ ರಿಂದ ೧೭೦೦ರ ಅವಧಿಯಲ್ಲಿ ಪ್ರತಿ ಮಾಡಿದ ಹದಿನೈದಕ್ಕೂ ಮಿಕ್ಕಿನ ಯಕ್ಷಗಾನ-ಪ್ರಸಂಗಗಳನ್ನು ತಾವು ನೋಡಿರುವುದಾಗಿಯೂ ಅವುಗಳಲ್ಲಿ ಕೆಲವನ್ನು ಸಂಗ್ರಹಿಸಿರುವುದಾಗಿಯೂ ಕಾರಂತರು ಹೇಳಿರುತ್ತಾರೆ".[೫]

---

೨ ಪಿ.ವಿ. ಶಾಸ್ತ್ರೀ, ಸಾಹಿತ್ಯದ ಪ್ರಕಾರಗಳು. ಪು. ೧೦೪

೩ ಎನ್.ಎಸ್. ವೆಂಕಟರಾಮ್- ರಂಗಭೂಮಿ . ಪು-೨೭

೪ ಕೆ.ಶಿವರಾಮ ಕಾರಂತ, ಯಕ್ಷಗಾನ ಬಯಲಾಟ. ಪು-೩೧

೫. ಡಾ. ಕೆ.ಮರುಳಸಿದ್ದಪ್ಪ, ಆಧುನಿಕ ಕನ್ನಡ ನಾಟಕ, ಪು.೧೬

ಹೀಗಾಗಿ ಕನ್ನಡ ರಂಗಭೂಮಿಯ ಜಾನಪದ ವಾಹಿನಿಯಲ್ಲಿ ಅತ್ಯಂತ ಪ್ರಾಚೀನವಾದುದು ದಕ್ಷಿಣ ಕನ್ನಡ ಜಿಲ್ಲೆಯ ಭೂತಾರಾಧನೆ ಎಂದು ಸ್ಪಷ್ಟವಾಗುತ್ತದೆ. ಅಲ್ಲಿ ಅಸಂಖ್ಯಾತ ಭೂತಗಳನ್ನು, ಚೌಡಿ ದೇವತೆಗಳನ್ನು ಆರಾಧಿಸುವುದು ಬಹಳ ಹಿಂದಿನಿಂದಲೂ ಬೆಳೆದುಬಂದ ಒಂದು ಪದ್ಧತಿ. ಉತ್ತರ ಕರ್ನಾಟಕದಲ್ಲಿ ಶಕ್ತಿ ಪೂಜೆಯ ಅಂಗವಾಗಿ ಬೆಳೆದುಬಂದ ಒಂದು ಆರಾಧನಾ ಪದ್ಧತಿ ಎಲ್ಲವ್ವನ ಕುಣಿತ. ಈ ಎಲ್ಲವ್ವನ ಕುಣಿತ ಅಲ್ಲಿನ ಬಯಲಾಟಗಳಮೇಲೆ ವಿಶೇಷ ಪ್ರಭಾವ ಬೀರಿರುವುದನ್ನು ಗುರುತಿಸಬಹುದಾಗಿದೆ.

ಕೋಲೆಬಸವನ ಆಟ, ಕೋಲಾಟ, ವೀರಗಾಸೆಕುಣಿತ, ಹಗಲುವೇಷ ಮೊದಲಾದ ಜನಪದರೂಪಗಳು ನಾಟಕದ ಕೆಲವು ಅಂಶಗಳನ್ನು ಮೈಗೂಡಿಸಿಕೊಂಡಿದ್ದವು. ಹಾಗೆಯೇ ಹರಿಕಥೆಯ ಸಂಭಾಷಣಾ ತಂತ್ರದಲ್ಲಿಯು ನಾಟಕದ ಲಕ್ಷಣಗಳನ್ನು ಕಾಣಬಹುದು.

ನಮ್ಮ ಕನ್ನಡ ನಾಡಿನ ಪ್ರಾಚೀನ ರಂಗಭೊಮಿಯ ಬಗ್ಗೆ ಅನೇಕ ಉಲ್ಲೇಖಗಳು ಸುಮಾರು ಒಂಭತ್ತನೆಯ ಶತಮಾನದಿಂದಲೂ ಕನ್ನಡ ಕಾವ್ಯ ಮತ್ತು ಶಾಸನಗಳಲ್ಲಿ ಕಂಡು ಬರುತ್ತವೆ. ಬಾದಾಮಿ ತಾಲೂಕಿನ ಒಂದು ಶಾಸನವು ಅಚಲದ ಎಂಬ ನರ್ತಕನ ವರ್ಣನೆ ಮಾಡಿದೆ. ೭ನೇ ಶತಮಾನದ ಆ ಕನ್ನಡಿಗ ನಟನ ಸಿಂಹನಾದವನ್ನು ಕೇಳಿದರೆ ಸಾಕು ಉಳಿದ ನಟರು ತೆಪ್ಪಗಾಗುತ್ತಿದ್ದರು. ಅವನ ನರ್ತನ ಕಲೆಯ ವಜ್ರಾಘಾತಕ್ಕೆ ಉಳಿದ ನಟರೆಂಬ ಪರ್ವತಗಳು ನೆಲಸಮವಾಗುತ್ತಿದ್ದವೆಂಬ ವರ್ಣನೆಯನ್ನು ಕಾಣಬಹುದು.

ಪಟ್ಟದಕಲ್ಲಿನ ಶಾಸನವೊಂದರಲ್ಲಿ (ಕ್ರಿ.ಶ.೮೫೦) ಭರತನಾಟ್ಯ ಪ್ರವೀಣನಾದ 'ನಟಸೇನ್ಯ' ಎಂಬ ನಟನೊಬ್ಬನ ವರ್ಣನೆಯಿದ್ದು, ಈತ ನರ್ತಕನಿದ್ದಿರಬೇಕೆಂದು ವಿದ್ವಾಂಸರು ಊಹಿಸಿದ್ದಾರೆ.

ಶ್ರೀವಿಜಯನ 'ಕವಿರಾಜಮಾರ್ಗ' (ಕ್ರಿ.ಶ.೮೭೦)ದಲ್ಲಿ ಪಗರಣ ಒಂದು ಹಾಸ್ಯ ಪ್ರಧಾನ ಜನಪದ ನಾಟಕವಾಗಿತ್ತೆಂದು ಉಲ್ಲೇಖಿಸಲಾಗಿದೆ.

ಕನ್ನಡದ ಮೊದಲ ಉಪಲಬ್ಧ ಗದ್ಯಕೃತಿಯಾದ ಶಿವಕೋಟ್ಯಾಚಾರ್ಯನ ವಡ್ಡಾರಾಧನೆಯಲ್ಲಿ (ಸು. ಕ್ರಿ.ಶ.೯೨೦) ಪಗರಣ ಹೇಗೆ ಹುಟ್ಟಿತೆಂಬ ಬಗ್ಗೆ ಒಂದು ಕಥೆಯಿದೆ. ಪಂಪ, ರನ್ನ ದುರ್ಗಸಿಂಹ ಮುಂತಾದವರುಸಹ ನಾಟಕ ಪ್ರದರ್ಶನಗಳನ್ನು ಉಲ್ಲೇಖಿಸಿದ್ದಾರೆ. "ದುರ್ಗಸಿಂಹನು ಸ್ಮರಿಸಿದ ಕನ್ನಮ್ಮಯ್ಯನ ರಚನೆ 'ಮಾಳವೀ ಮಾಧವ' ಕೇಶಿರಾಜನ 'ಶಬ್ಧಮಣಿದರ್ಪಣ' ದಲ್ಲಿ ಪ್ರಸ್ತಾಪಿಸಲಾದ 'ಸುಭದ್ರಾಹರಣ' ಮತ್ತು 'ಪ್ರಭೋದ ಚಂದ್ರ'-ಇವು ಕನ್ನಡ ನಾಟಕಗಳಿರಬಹುದು".[೬]

---

೬ ತ.ಸು. ಶಾಮರಾಯ-ಕನ್ನಡ ಸಾಹಿತ್ಯ ಚರಿತ್ರೆ . ಪು.೨೫೯

ಧಾರವಾಡ ಜಿಲ್ಲೆಯ ಮುಗುದದ ಶಾಸನವೊಂದರಲ್ಲಿ (ಕ್ರಿ.ಶ. ೧೦೪೫) ಮಹಾಸಾಮಂತ ಮಾರ್ತಾಂಡಯ್ಯನು ನಾಟಕ ಶಾಲೆಯನ್ನು ಕಟ್ಟಿಸಿದನೆಂದು ತಿಳಿದು ಬರುತ್ತದೆ. ಆಂದ್ರಪ್ರದೇಶದ ಕರ್ನೂಲು ಜಿಲ್ಲೆಯ ಚೆರವು ಬೆಳಗಲ್ಲು ಎಂಬ ಗ್ರಾಮದಲ್ಲಿರುವ ಶಾಸನವೊಂದರಲ್ಲಿ (ಕ್ರಿ.ಶ. ೧೫೧೪) ತಾಯಿಕುಂಡ ನಾಟಕದ ಜಾಗಯ್ಯನ ಮಗ ನಟ್ಟುವ ನಾಗಯ್ಯನ ಉಲ್ಲೇಖವಿದೆ.

ಇದುವರೆಗೆ ಉಲ್ಲೇಖಿಸಲಾದ ಕಾವ್ಯ, ಶಾಸ್ತ್ರಗ್ರಂಥ, ಶಾಸನಗಳ ಆಧಾರದಿಂದ ಕ್ರಿ.ಶ. ೭ನೆಯ ಶತಮಾನಕ್ಕೂ ಮುಂಚಿನಿಂದಲೇ ನಾಟಕಗಳಿದ್ದಿರಬೇಕೆಂದು ತಿಳಿಯಬಹುದು.

ಸಿಂಗಾರಾರ್ಯನನಂತರ ಹತ್ತೊಂಬತ್ತನೆಯ ಶತಮಾನದ ಕೊನೆಯವರೆಗೂ ಕನ್ನಡದ ಯಾವುದೇ ಸ್ವತಂತ್ರ ನಾಟಕವಾಗಲೀ ಅಥವಾ ಸಂಸ್ಕೃತದ ಅನುವಾದವಾಗಲೀ ದೊರಕಿಲ್ಲ. ೧೯ನೇ ಶತಮಾನದ ಕೊನೆಯ ವೇಳೆಗೆ ಚುರಮರಿ ಶೇಷಗಿರಿರಾಯರ 'ಶಾಕುಂತಲಾ' ನಾಟಕದೊಂದಿಗೆ ಭಾಷಾಂತಾರ ನಾಟಕಗಳ ಸರಮಾಲೆಯೇ ಕನ್ನಡದಲ್ಲಿ ಪ್ರಾರಂಭವಾಯಿತು.

"೧೮೮೭ರಲ್ಲಿ ರಚಿತವಾದ 'ಇಗ್ಗಪ್ಪ ಹೆಗ್ಗಡೆ ಪ್ರಹಸನ' ಕನ್ನಡದ ಮೊದಲ ಪ್ರಹಸನವಾಗಿದೆ. ಇದು ಕನ್ನಡದ ಉಪಭಾಷೆಯಾದ ಹವ್ಯಕ ಭಾಷೆಯಲ್ಲಿ ರಚಿತವಾಗಿರುವುದು ಇದರ ವಸ್ತು ವಧುದಕ್ಷಿಣೆ ಕುರಿತದ್ದಾಗಿದೆ."[೭]

'ಆಧುನಿಕ ನಾಟಕಗಳ ಪಿತಾಮಹ' ರಾದ ಕೈಲಾಸಂ (ಟೊಳ್ಳು ಗಟ್ಟಿ, ಬಹಿಷ್ಕಾರ, ಸೂಳೆ) ರವರು ನಾಟಕ ಸಾಹಿತ್ಯದಲ್ಲಿ ಕ್ರಾಂತಿಯನ್ನೇ ಮಾಡಿದರು. ಶ್ರೀರಂಗರು (ಹರಿಜನ್ವಾರ, ಪ್ರಪಂಚ ಪಾಣಿಪತ್ತು), ಶಿವರಾಮ ಕಾರಂತ (ನಾರದನ ಗರ್ವಭಂಗ, ಹಣೆಬರಹ, ಗರ್ಭಗುಡಿ, ಮುಕ್ತದ್ವಾರ), ಬಿ.ಎಂ.ಶ್ರೀ,(ಅಶ್ವತ್ಥಾಮನ್), ಪು.ತಿ.ನ (ಅಹಲ್ಯೆ, ಗೋಕುಲನಿರ್ಗಮನ, ಹಂಸದಮಯಂತಿ) ಕೆ.ವಿ. ಸುಬ್ಬಣ್ಣ, (ಲೋಕ ಶಾಕುಂತಲಾ, ಚಾಣುಕ್ಯ ಪ್ರಪಂಚ, ಮಿಸ್ ಸದಾರಮೆ) ಮಾಸ್ತಿವೆಂಕಟೇಶ ಅಯ್ಯಂಗಾರ್ (ಕಾಕನ ಕೋಟೆ) ಕುವೆಂಪು (ಬೆರಳ್‌ಗೆ ಕೊರಳ್, ಯಮನಸೋಲು, ಶೂದ್ರತಪಸ್ವಿ, ಸ್ಮಶಾನಕುರುಕ್ಷೇತ್ರ), ದ.ರಾ.ಬೇಂದ್ರೆ (ಗೋಲ್, ದೆವ್ವನ ಮನೆ, ತಲೆದಂಡ) ಜಿ.ಬಿ. ಜೋಷಿ (ಜಡಭರತ, ನಾನೇ ಬಿಜ್ಜಳ), ಸಂಸ (ವಿಗಡ ವಿಕ್ರಮರಾಯ, ಬಿರುದೆಂತೆಂಬರಗಂಡ) ಪಿ.ಲಂಕೇಶ (ಸಂಕ್ರಾಂತಿ), ಚಂಪಾ( ಗೋಕರ್ಣದ ಗೌಡಸಾನಿ, ಅಪ್ಪ), ಚಂದ್ರಶೇಖರ ಕಂಬಾರ (ಜೋಕುಮಾರಸ್ವಾಮಿ, ಶಿವರಾತ್ರಿ), ಗಿರೀಶ್ ಕಾರ್ನಾಡ್ (ಯಯಾತಿ, ತಲೆದಂಡ) ಹೆಚ್.ಎಸ್. ಶಿವಪ್ರಕಾಶ (ಮಹಾಚೈತ್ರ) ಎಂ.ಎಂ. ಕಲಬುರ್ಗಿ

---

೭ ಹಾಲತಿ ಸೋಮಶೇಖರ: 'ಸಾಯೋ ಆಟ' ಒಂದು ಅಧ್ಯಯನ ಪು. ೨

(ಕೆಟ್ಟಿತ್ತು ಕಲ್ಯಾಣ) ಮುಂತಾದವರು ತಮ್ಮ ಅತ್ಯಮೂಲ್ಯವಾದ ನಾಟಕ ಕೃತಿರತ್ನಗಳಿಂದ ಕನ್ನಡ ನಾಟಕ ಲೋಕವನ್ನು ಶ್ರೀಮಂತಗೊಳಿಸಿದ್ದಾರೆ.

**ಕನ್ನಡ ರಂಗಭೂಮಿಯ ಪರಂಪರೆ:**

ಕಥೆಯೊಂದು ಬರಹಗಾರನ ಮನಃಪಟಲದಲ್ಲಿ ಮೂಡಿ ನಾಟಕ ಕೃತಿಯಾಗಿ ಬರಹ ರೂಪದಲ್ಲಿ ಕಾಣಿಸಿಕೊಂಡ ಮೇಲೆ ಅದನ್ನು ರಂಗವೇದಿಕೆಯಲ್ಲಿ ಪ್ರತಿಭಾವಂತ ಕಲಾವಿದರು ಪ್ರದರ್ಶನ ನೀಡಿದಾಗ ಅದರ ಸಾರ್ಥಕತೆಯನ್ನು ಕಾಣಬಹುದು. ಕನ್ನಡ ರಂಗಭೂಮಿಯ ವಿಕಾಸ ಮಾರ್ಗದಲ್ಲಿ ಮೂರು ಪ್ರತ್ಯೇಕವಾದ ಪ್ರಮುಖ ಪರಂಪರೆಗಳನ್ನು ಗುರುತಿಸಬಹುದಾಗಿದೆ. ಅವು ಜನಪದ ರಂಗಭೂಮಿ, ವೃತ್ತಿ ರಂಗಭೂಮಿ ಮತ್ತು ಹವ್ಯಾಸಿ ರಂಗಭೂಮಿ ಎಂಬ ಈ ಮೂರೂ ಪರಂಪರೆಗಳು ಸಹ ಕರ್ನಾಟಕದ ರಂಗ ವೈಭವಕ್ಕೆ ಅಮೂಲ್ಯ ವೇದಿಕೆಯನ್ನು ಕಲ್ಪಿಸಿಕೊಟ್ಟಿವೆ.

**ಜನಪದ ರಂಗಭೂಮಿ:**

"ಯಾವ ದೇಶದಲ್ಲಿಯೇ ಆದರೂ ಜನಪದ ರಂಗಭೂಮಿಯೇ ನಾಟಕ ರಂಗದ ಅತ್ಯಂತ ಹಳೆಯ ರೂಪವೆಂದು ಸಂಶೋಧಕರ ಸಿದ್ಧಾಂತ. ಜನತೆಯ ನಲಿವು ಒಲವುಗಳನ್ನು, ಪ್ರತಿಬಿಂಬಿಸುತ್ತ ದೇವಪೂಜೆಯ ಒಂದು ಪ್ರಕಾರವಾಗಿ ಮೈತಳೆದು ನಿಂತ ರಂಗಮಂಚವದು. ಹಾಡು, ಕುಣಿತ, ಭಕ್ತಿಗಳೇ ಅದರ ನೆಲೆಗಟ್ಟು. ಆಡುವವನೂ ನೋಡುವವನೂ ಅದರಲ್ಲಿ ಸಮಸಮ ಭಾಗಿಗಳು ಜನಸಾಮಾನ್ಯರಿಗೆ ಹೊರತಾದ ರಾಜಾಸ್ಥಾನದ ನಾಟಕದಂತೆ ಔಪಚಾರಿಕವಾದ ಪ್ರದರ್ಶನವಲ್ಲ. ಮೂಲದಲ್ಲಿ ಅದು ಗೀತ ನೃತ್ಯ ಪ್ರಧಾನವಾದ ಭಕ್ತಿ ಪ್ರದರ್ಶನ. ಅದರಲ್ಲಿ ಭಾಗವಹಿಸಲು ಸಾಮಾನ್ಯ ಜನತೆಗೆ ಮುಕ್ತದ್ವಾರ. ಜನತೆ ಸ್ವಸಂತೋಷಕ್ಕಾಗಿ ಕಟ್ಟಿ ಬೆಳೆಯಿಸಿದ ಈ ರಂಗಭೂಮಿ, ಕಾಲ ಕಳೆದಂತೆ ಜನತೆಯ ರಂಗಪ್ರಜ್ಞೆ ಬೆಳೆದಂತೆ ಹೊಸರೂಪಗಳನ್ನು ತಳೆದರೂ ಮೂಲದ ನೃತ್ಯ ಗೀತೆಗಳು ಅದರ 'ಆಟ' ಗಳ ನೆಲೆಗಟ್ಟಾಗಿಯೇ ಉಳಿದವು".[೮] ಈ ಮಣ್ಣಿನ ಅತಿ ಸಾಮಾನ್ಯ ಜನರಿಂದ ಸಾಮಾನ್ಯ ಜನರಿಗಾಗಿ ರೂಪ ತಳೆದ ಈ ಜನಪದ ನಾಟಕಗಳು ಜನಸಾಮಾನ್ಯರಲ್ಲಿ ಧಾರ್ಮಿಕ ಪ್ರಜ್ಞೆ, ಮನೋರಂಜನೆ ಹಾಗೂ ಜ್ಞಾನವನ್ನು ತುಂಬುವ 'ಜನಪರ' ವಾಹಿನಿಯಾಗಿ ಬೆಳೆಯಿತು.

ಸಮಷ್ಟಿಸೃಷ್ಟಿಯ ಅಭಿವ್ಯಕ್ತಿಯಾದ ಈ ಜನಪರವಾದ ಜನಪದ ಕಲೆಯು ಒಂದೇ ಸಾಂಸ್ಕೃತಿಕ ಮೂಲದಿಂದ ಹುಟ್ಟಿ ಬಂದಿದ್ದರೂ ಸಹ ಕಾಲಾನುಕ್ರಮದಲ್ಲಿ ಭಿನ್ನ ಭಿನ್ನ ಪ್ರಭಾವಗಳಿಂದಾಗಿ ವಿಭಿನ್ನ ರೂಪಗಳನ್ನು ಪಡೆಯುತ್ತಾ ಬೆಳೆದಿದೆ. ಅವುಗಳತ್ತ ದೃಷ್ಟಿ ಹಾಯಿಸಿದಾಗ; ಕೋಲಾಟ, ನಂದಿಕೋಲಾಟ, ದಾಸರಾಟ, ಕಿಳಿಕೇತರ ಆಟ,

---

೮ ಡಾ. ಎಚ್.ಕೆ. ರಂಗನಾಥ- ಕರ್ನಾಟಕ ರಂಗಭೂಮಿ.ಪುಟ ೪೨

ಗೊಂಬೆಯ ಆಟ ಮುಂತಾದವು ಆಟದ ಪ್ರಕಾರದಲ್ಲಿ, ಲಾವಣಿ, ಗೀಗೀ-ಜೀಜೀ ಪದ ಕರಡಿ ಮದ್ದಳೆ ಮುಂತಾದವು ಜನಪದ ಕಲಾ ಪ್ರಕಾರದಲ್ಲಿ; ಜೋಗತಿ-ಜೋಗಪ್ಪ ಗೊಗ್ಗಯ್ಯ, ಪುರಂತರ (ವೀರಮಕ್ಕಳ ಕುಣಿತ)ಮುಂತಾದವು ಧಾರ್ಮಿಕ ತಳಹದಿಯಲ್ಲಿನ ಕಲಾ ಪ್ರಕಾರಗಳಾಗಿ; ಗೊಗ್ಗಯ್ಯ, ಹೆಳವ, ಕವಲೆತ್ತು, ವೇಷಗಾರ(ಬಹುರೂಪ), ಸಾದು-ಅಯ್ಯ, ಕರಪಾಲ ಮತ್ತು ಕಂಬಿಅಯ್ಯ ಮುಂತಾದವು ಜೀವನೋಪಾಯವಾಗಿರುವ ಜನಪದ ಕಲಾಪ್ರಕಾರಗಳಾಗಿ, ಮುಂದುವರೆದು ಮುಂದೆ ಯಕ್ಷಗಾನ, ದೊಡ್ಡಾಟ-ಬಯಲಾಟ, ಸಣ್ಣಾಟ, ಡಪ್ಪಿನ ಆಟ, ರಾಧಾನ ಆಟ, ಪಾರಿಜಾತ ಆಟ ಮುಂತಾದ ಕಲೆಗಳು ವ್ಯವಸ್ಥಿತ ರಂಗಭೂಮಿಯ ರೂಪವನ್ನು ತಳೆದವು.

**ಯಕ್ಷಗಾನ:** ಯಕ್ಷಗಾನವು ಸಂಗೀತ, ಸಂಭಾಷಣೆ, ಕುಣಿತ ಮೂರನ್ನೂ ಒಳಗೊಂಡ ರಂಗರೂಪ. ಆಂಧ್ರದ ಜಕ್ಕುಲಕಥ (ಕೂಚಿಪುಡಿ), ತಮಿಳುನಾಡಿನ ಮೇಳತ್ತೂರು ಭಾಗವತ ಮೇಳ ಮತ್ತು ಕರ್ನಾಟಕದ 'ಬಯಲಾಟ', ಈ ಮೂರು ಪ್ರಕಾರಗಳು ಯಕ್ಷಗಾನದೊಂದಿಗೆ ಸಾಮ್ಯತೆಯನ್ನು ಹೊಂದಿದೆ.ಮಾತ್ರವಲ್ಲ ಕರ್ನಾಟಕ, ತಮಿಳುನಾಡು ಹಾಗು ಆಂಧ್ರವನ್ನು ಆಳಿದ ಚಾಲುಕ್ಯ, ರಾಷ್ಟ್ರಕೂಟ, ವಿಜಯನಗರ ಅರಸರ ಆಳ್ವಿಕೆಯಿಂದುಂಟಾದ ಸಾಂಸ್ಕೃತಿಕ ವಿನಿಮಯವೇ ಇದಕ್ಕೆ ಕಾರಣ. ದಕ್ಷಿಣಕನ್ನಡ, ಉತ್ತರ ಕನ್ನಡ, ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳೇ ಯಕ್ಷಗಾನ ಪರಂಪರೆಯ ತವರೂರು. ಯಕ್ಷಗಾನದಲ್ಲಿ ಭಾಗವತನೇ ಪ್ರಥಮ ಪಾತ್ರಧಾರಿ. ಎರಡನೆಯ ವೇಷದಾರಿಯೇ ಕಥಾನಾಯಕ. ಯಕ್ಷಗಾನ ಪ್ರಸಂಗಗಳ ಕಥೆ ಅತಿಮಾನುಷ ಪ್ರಪಂಚಕ್ಕೆ ಸೇರಿದ್ದು. ರಾಮಕೃಷ್ಣರಂತಹ ಅವತಾರಿಗಳು, ಪಾಂಡವ ಕೌರವರಂತಹ ರಾಜರು, ರಾಕ್ಷಸರು, ಕಿನ್ನರ ಗಂಧರ್ವರು, ಋಷಿಗಳು, ಸ್ತ್ರೀಯರು ಮುಂತಾದ ವೈವಿಧ್ಯಮಯ ಪಾತ್ರಗಳು, ಪಾತ್ರಕ್ಕೆ ತಕ್ಕ ಗಂಭೀರತೆಗೆ ಅನುಗುಣವಾಗಿ ವೇಷಭೂಷಣಗಳನ್ನು ತೊಡುತ್ತಾರೆ. ಕರ್ನಾಟಕದ ಕರಾವಳಿಯಲ್ಲಿ ದೇವರಿಗೆ ಹರಕೆ ಹೊತ್ತು 'ಸೇವೆ ಆಟಗಳನ್ನು' ನೆರವೇರಿಸುವ ಪರಂಪರೆ ಇದೆ. 'ಧರ್ಮಸ್ಥಳದ ಮಂಜುನಾಥೇಶ್ವರ ಯಕ್ಷಗಾನ ಮಂಡಲಿ' 'ಕೆರೆಮನೆ ಮೇಳ' ಮುಂತಾದವು ಯಕ್ಷಗಾನವನ್ನು ಇಂದಿಗೂ ಜೀವಂತವಾಗಿಟ್ಟಿವೆ. ಶಿವರಾಮ ಕಾರಂತರು ಈ ಕಲೆಯನ್ನು ಅಂತರರಾಷ್ಟ್ರೀಯ ಮಟ್ಟಕ್ಕೇರಿಸಿದರು. ಸಿನಿಮಾದ ಅಧಿಕ ಪ್ರಭಾವವಿದ್ದಾಗ್ಯೂ ಕರಾವಳಿಯಲ್ಲಿ ಯಕ್ಷಗಾನ ಇಂದಿಗೂ ಹೊಸ ಹೊಸ ರೂಪಗಳನ್ನು ಹೊಂದಿ ಜೀವಂತವಾಗಿದೆ.

**ದೊಡ್ಡಾಟ, ಬಯಲಾಟ:**

ದೊಡ್ಡಾಟವು ಕರ್ನಾಟಕದ ಗಂಡುಕಲೆ. ಹಂಪೆಯ ಸುತ್ತಮುತ್ತಲಿನ ಊರುಗಳಲ್ಲಿ ಈ ಜಾನಪದ ರಂಗಪ್ರಕಾರ ಬೆಳೆದು ಬಂದಿದೆ "ಯಕ್ಷಗಾನವೆಂದರೆ ಕನ್ನಡನಾಡಿನ ಕರಾವಳಿ ಸೀಮೆಯ ನಿಷ್ಕರ್ಷವಾದ ರಂಗಕಲೆ. ಅದರ ಒಂದು ರೂಪ ಬಯಲು ಸೀಮೆಯಲ್ಲಿ ಬೆಳೆದು ಬಂದುದಕ್ಕೆ ಮೂಡಲಪಾಯ ಅಥವಾ ದೊಡ್ಡಾಟ ಎಂದು ಹೆಸರು. ಮೂಡಲಪಾಯ ಎಂದರೆ ಪೂರ್ವದ ಪದ್ಧತಿ. ಅರ್ಥಾತ್ ಪೂರ್ವ ಪ್ರದೇಶದ

ಪ್ರಯೋಗ ಪದ್ಧತಿ 'ಅಟ್ಟ ಅಥವಾ 'ರಂಗಮಂಚ'ದ ಮೇಲೆ ಆಡುವ ಆಟವಾದ್ದರಿಂದ ಇದು 'ಅಟ್ಟದಾಟ'. ಬಯಲಲ್ಲೇ ಆಡುವುದರಿಂದ ಇದನ್ನು ಬಯಲಾಟವೆಂದೂ ಕರೆಯುವುದುಂಟು. ಭವ್ಯವಾದ ಆಟವಾದ್ದರಿಂದ 'ದೊಡ್ಡಾಟ', ದಾಸರು ಆಡುತ್ತಿದ್ದರೆಂಬ ಕಾರಣದಿಂದ 'ದೊಂಬಿದಾಸರ ಕುಣಿತ', ಆದರೆ ಇದನ್ನೆಂದೂ ಯಕ್ಷಗಾನವೆಂದು ಕರೆದುದಿಲ್ಲ. ಯಕ್ಷಗಾನ ಪ್ರಸಂಗಗಳನ್ನೇ ಆಕೃತಿಗಳನ್ನೇ ಅಳವಡಿಸಿಕೊಂಡು ಇಲ್ಲಿನವರು ಆಡಿದಾಗಲೂ, ಆಟದ ರೀತಿ ಸಿಷ್ಕೃಷ್ಟವಾಗಿ ಬೇರೆಯಾದುದರಿಂದ ಇದು 'ಮೂಡಲಪಾಯ' ಅಥವಾ 'ದೊಡ್ಡಾಟ' ಎಂದೇ ಗುರುತಿಸುವುದು ಸೂಕ್ತವಾಗಿದೆ."[೯]

ಗಣೇಶನ ಸ್ತುತಿಯೊಂದಿಗೆ ಪ್ರಾರಂಭವಾಗುವ ದೊಡ್ಡಾಟದ ಮೊದಲನೆಯ ದೃಶ್ಯ ಒಡ್ಡೋಲಗ. ಪ್ರತಿ ಪಾತ್ರದ ಪರಿಚಯ, ಬಂದವರು ಯಾರು, ಯಾತಕ್ಕಾಗಿ ಬಂದರು ಎಂಬುದನ್ನು ಸಾರಥಿ, ಕೋಡಂಗಿ, ಹನುಮನಾಯಕ ಎಂಬ ಹೆಸರಿನಿಂದ ಕರೆಯಲ್ಪಡುವ ಪಾತ್ರಧಾರಿಯು ತಿಳಿಯಪಡಿಸುತ್ತಾನೆ. ಇಲ್ಲಿ "ನಿರ್ದಿಷ್ಟ ರಂಗಪರದೆಗಳಾಗಲಿ, ಪಾತ್ರ ಈ ಬದಿಯಿಂದ ಬರಬೇಕು ಆ ಬದಿಗೆ ಹೋಗಬೇಕೆಂಬ ನಿರ್ದೇಶನಗಳಾಗಲಿ ಇಲ್ಲಿ ಇಲ್ಲ. ಇಲ್ಲಿ ಉಪಯೋಗಿಸುವ ವಾದ್ಯಗಳು ಪುಂಗಿ, ಬಟ್ಟಲತಾಳ, ಪಿಟೀಲು, ಮದ್ದಳೆ. ಅನೇಕ ದೃಶ್ಯಗಳಲ್ಲಿ ಸ್ತ್ರೀ ಪಾತ್ರ, ಪುರುಷಪಾತ್ರಗಳು ಜೊತೆಯಾಗಿ ಕುಣಿಯಬೇಕಾಗಿರುವುದರಿಂದ ರಂಗಭೂಮಿಯ ಒಂದು ಪಕ್ಕದಲ್ಲಿ ವಾದ್ಯಗಾರರು, ಮುಮ್ಮೇಳದವರು ಇರುವುದರಿಂದ ರಂಗಭೂಮಿ ಹೆಚ್ಚು ವಿಸ್ತಾರ ಹೊಂದಿರುತ್ತದೆ. ಮೂರುಬದಿಯಲ್ಲಿಯೂ ಪ್ರೇಕ್ಷಕರಿರುವುದರಿಂದ ನೃತ್ಯದ ಒಂದುಭಾಗವನ್ನು ಎರಡುಮೂರು ಬಾರಿಯಾದರೂ ಕುಣಿಯಲೇಬೇಕು".[೧೦] ಒಟ್ಟಾರೆಯಾಗಿ ದೊಡ್ಡಾಟವು ಕರ್ನಾಟಕದ ಜಾನಪದ ರಂಗಭೂಮಿಯ ವಿಶಿಷ್ಟ ಕಲೆಯಾಗಿ ಇಂದಿಗೂ ಸಹ ತನ್ನ ಸ್ಥಾನಮಾನವನ್ನು ಉಳಿಸಿಕೊಂಡಿದೆ.

**ಸಣ್ಣಾಟ:**

ಇದು ದೊಡ್ಡಾಟದ ಮಾದರಿಯಲ್ಲಿ ನಡೆಯುವ ಒಂದು ಜಾನಪದ ಆಟವಾದರೂ ದೊಡ್ಡಾಟದಷ್ಟು ಆರ್ಭಟ ಇಲ್ಲಿ ಕಂಡು ಬರುವುದಿಲ್ಲ. "ಸಣ್ಣಾಟವೆಂದರೆ ಉತ್ತರ ಕರ್ನಾಟಕದ ಜಾನಪದ ರಂಗಭೂಮಿಯ 'ನಾಟಕ'ವೇ ಎನ್ನಬಹುದು. ಪರದೆಗಳುಳ್ಳ ರಂಗಸಜ್ಜಿಕೆ, ಪಾತ್ರಗಳ ವೇಷಾಲಂಕಾರ, ಸಂಭಾಷಣೆಯ ರಚನೆಗಳ ದೃಷ್ಟಿಯಿಂದ, ಸಣ್ಣಾಟವು ವೃತ್ತಿ ರಂಗಭೂಮಿಗೆ ಋಣಿಯಾಗಿದೆ. ಈಗ ಸುಮಾರು ಐವತ್ತು ವರ್ಷಗಳ ಅವಧಿಯಲ್ಲಿ ಬೆಳೆದುಬಂದ ಹಳ್ಳಿಯ ನಾಟಕ ಪದ್ಧತಿ. ಇದು ಬೆಳಗಾವಿ ಹಾಗೂ ಧಾರವಾಡ ಜಿಲ್ಲೆಗಳಲ್ಲಿ ಜನಪ್ರಿಯವಾಗಿದೆ".[೧೧]

---

೯. ಕನ್ನಡ ರಂಗಭೂಮಿ ನಡೆದುಬಂದ ದಾರಿ-ಸಂ-ಡಾ॥ ಶ್ರೀರಂಗ

೧೦ ಎಮ್.ಟಿ.ಧೂಪದ -ಉತ್ತರ ಕರ್ನಾಟಕದ ಜಾನಪದ ರಂಗಭೂಮಿ.ಪುಟ ೫೧೩

೧೧. ಡಾ॥ಹೆಚ್.ಕೆ.ರಂಗನಾಥ್-ಕರ್ನಾಟಕ ರಂಗಭೂಮಿ.ಪು-೧೦೬

"ದೊಡ್ಡಾಟದಿಂದ ಬೇರ್ಪಡಿಸಿ ಹೇಳುವುದಕ್ಕಾಗಿ ಈ ಕಲೆಗೆ ಸಣ್ಣಾಟ ಎಂಬ ಹೆಸರು ಬಂದಿರಬಹುದು. ಅಲ್ಲದೆ ದೊಡ್ಡಾಟದ ವಿಸ್ತಾರ, ರಂಗಭೂಮಿ, ಪಾತ್ರವರ್ಗ, ವೇಷಭೂಷಣಗಳಲ್ಲಿ ಹೆಸರಿಗೆ ತಕ್ಕಂತೆ ಇದರಲ್ಲಿ ಕಡಿಮೆಯಾಗಿಯೇ ಇರುವುದುಂಟು ಮತ್ತು ಇವುಗಳನ್ನು ಶೈವ ವೈಷ್ಣವ ಸಣ್ಣಾಟಗಳೆಂದು ವಿಭಾಗಿಸಬಹುದಾಗಿದೆ. ಶೈವ, ವೈಷ್ಣವ ಮತ ಪ್ರಚಾರ ಉದ್ದೇಶದಿಂದಲೇ ಸಣ್ಣಾಟಗಳು ಹುಟ್ಟಿದುವೆಂಬುದಂತೂ ಸತ್ಯ. ವಸ್ತುವನ್ನು ದೃಷ್ಟಿಯಲ್ಲಿರಿಸಿಕೊಂಡು ಉತ್ತರ ಕರ್ನಾಟಕದ ಸಣ್ಣಾಟಗಳನ್ನು ಶರಣರಾಟ-ದಾಸರಾಟ ಎಂದೂ ವಿಭಾಗಿಸುತ್ತಾರೆ."[೧೨] ಸಣ್ಣಾಟ ವಚನಕಾರರಿಂದ ಹಾಗೂ ಭಕ್ತಿಪಂಥದಿಂದ ಹೆಚ್ಚಿನ ಪ್ರಭಾವ ಪಡೆದುಕೊಂಡಿದೆ.

ಸಾಮಾಜಿಕ ಸಣ್ಣಾಟಗಳಲ್ಲಿ ಸಮಕಾಲಿನ ಪ್ರಜ್ಞೆ ಇರುವುದು ನಿಚ್ಚಳವಾಗಿ ಕಂಡುಬರುತ್ತದೆ. ೧೯ನೆಯ ಶತಮಾನದ ಅಂತ್ಯದಲ್ಲಿ ಪತ್ತರಮಾಸ್ತರ ಎಂಬಾತ ರಚಿಸಿದ 'ಸಂಗ್ಯಾಬಾಳ್ಯ' ಎಂಬ ಸಣ್ಣಾಟ ಈ ಶೈಲಿಯ ಅತ್ಯಂತ ಜನಪ್ರಿಯ ಪ್ರಯೋಗವಾಗಿದೆ.

**ಪಾರಿಜಾತ:**

ಇದರಲ್ಲಿ ಶ್ರೀಕೃಷ್ಣಪಾರಿಜಾತ, ವೆಂಕಟೇಶಪಾರಿಜಾತ ಮತ್ತು ಶಿವಪಾರಿಜಾತವೆಂಬ ಮೂರು ನಾಟ್ಯ ಪ್ರಕಾರಗಳಿವೆ. ಇಲ್ಲಿನ ವಸ್ತು ಅಲೌಕಿಕವೇ ಆಗಿರುತ್ತದೆ. ಪಾರಿಜಾತದಲ್ಲಿ ಲಯಬದ್ಧವಾದ ಹಾಡುಗಾರಿಕೆ, ಜನಪ್ರಿಯವಾದ ರಾಗಗಳು ಮತ್ತು ಕುಣಿತ ಕಂಡು ಬರುತ್ತವೆ. ಆದರೆ ಉತ್ತರ ಕರ್ನಾಟಕದಲ್ಲಿ ಪಾರಿಜಾತವೆಂದರೆ ಕೇವಲ ಶ್ರೀಕೃಷ್ಣ ಪಾರಿಜಾತವೆನ್ನುವಷ್ಟು ಪ್ರಸಿದ್ಧವಾಗಿದೆ. ಪಾರಿಜಾತ ರಂಗಕಲೆಯಲ್ಲಿ ಭೈರವಿ, ಕಾಪಿ, ಕಲ್ಯಾಣಿ ಮತ್ತು ನಿಲಾಂಬರಿ ರಾಗಗಳ ಬಳಕೆ ಹೆಚ್ಚು ಕಂಡುಬರುತ್ತದೆ. ಪಾತ್ರಗಳು ಸಂಭಾಷಣೆಯೊಂದಿಗೆ ವಾರ್ಧಕ ಷಟ್ಪದಿ, ಕಂದ ಪದ್ಯಗಳನ್ನು ಆಗಾಗ್ಗೆ ಹಾಡುತ್ತಾರೆ. ಇದರಿಂದ ಸಾಹಿತ್ಯ ಮೌಲ್ಯ ಹೆಚ್ಚುವಂತೆ ಆಗಿದೆ.

ಕನ್ನಡ ಜನಪದ ರಂಗಭೂಮಿಗೆ ಪೂರಕವಾಗಿ ಬಹುರೂಪಿಗಳು, ವೇಷಗಾರರು, ಹಗಲುವೇಷಗಾರರು, ಹಾವಾಡಿಗರು, ಕೋಲೇಬಸವನ ಆಟದವರು, ಕೋಲೇ ಮತ್ತು ಕರಡಿ ಕುಣಿಸುವವರು ಈ ಮೊದಲಾದ ಉಪಸಂಸ್ಕೃತಿ ಬೆಳೆದಿವೆ. ಈ ಕಲೆಯನ್ನೂ ನಿರ್ಲಕ್ಷಿಸುವಂತಿಲ್ಲ. ಕನ್ನಡ ಜನಪದ ರಂಗಭೂಮಿಗೆ ಇವರಿಂದಲೂ ಮಹತ್ತರ ಕೊಡುಗೆ ಲಭಿಸಿದೆ. ಮನುಷ್ಯರು ಮಾತ್ರವಲ್ಲ ಸಾಕುಪ್ರಾಣಿಗಳದ್ದೇ ಆದ ಆಟಗಳಲ್ಲಿ ಸ್ಥೂಲವಾಗಿ ನಾಟಕೀಯ ಗುಣಗಳನ್ನು ಗುರುತಿಸಬಹುದು.

ಜಾನಪದ ರಂಗಭೂಮಿಯ ಅಂತರಾರ್ಥವನ್ನು ಸಮಾಜದ ಎಲ್ಲ ವರ್ಗದವರೂ ಅರಿತು ಹರ್ಷಿಸುವಂತಾಗಬೇಕು. ಆಗ ಮಾತ್ರ ವೈವಿಧ್ಯತೆಯು ಹಾಳಾಗದಂತೆ ರಕ್ಷಿಸುವ ರೂಪ ರೇಖೆಗಳನ್ನು ರೂಪಿಸಬಹುದು. ಕರ್ನಾಟಕದ ಜಾನಪದ ರಂಗಭೂಮಿಯ ಉಳಿವಿಕೆಗಾಗಿ ಸ್ಪಷ್ಟವಾದ ಮತ್ತು ನಿಖರವಾದ ಮಾರ್ಗದಲ್ಲಿ

---

೧೨. ಕೆ. ಮರುಳಸಿದ್ಧಪ್ಪ-ಆಧುನಿಕ ಕನ್ನಡ ನಾಟಕ- ಪುಟ.೩೦,೩೧.

ಪ್ರಯತ್ನ ಈಗಿನಿಂದಲೇ ಪ್ರಾರಂಭವಾಗುವುದು ಅವಶ್ಯ. ಇಲ್ಲದಿದ್ದಲ್ಲಿ ನಾಳಿನ ಜನತೆ ಜನಪದ ರಂಗಭೂಮಿಯ ಬಗ್ಗೆ ತಿಳಿಯಲು ಚರಿತ್ರೆಯ ಪುಟಗಳನ್ನು ನೋಡಬೇಕಾದ ದುರ್ದೈವದ ದಿನಗಳನ್ನು ಕಾಣಬೇಕಾಗಬಹುದು.

## ವೃತ್ತಿ ರಂಗಭೂಮಿ:

"ನಾಟಕವನ್ನೇ ವೃತ್ತಿಯಾಗಿ ಅವಲಂಬಿಸಿ, ಮಂಡಳಿಗಳನ್ನು ಕಟ್ಟಿಕೊಂಡು ನಿರ್ವಹಿಸುವ ಪ್ರದರ್ಶನ ಪ್ರಕಾರವನ್ನು 'ವೃತ್ತಿರಂಗಭೂಮಿ' ಎನ್ನುತ್ತಾರೆ. ಇದು ಪ್ರಾಚೀನ ಸಂಸ್ಕೃತ ರಂಗಭೂಮಿಯಿಂದ ಬೇರೆಯಾದುದು. ರಂಗಭೂಮಿಯ ವ್ಯಾಪಾರಿ ಮುಖವನ್ನು ತೋರಿಸುವಂಥದು. ಅದರಿಂದ 'ಕಮರ್ಷಿಯಲ್ ಥಿಯೇಟರ್' ಎಂದೂ, ರಂಗಪ್ರಯೋಗಗಳಲ್ಲಿ ನವೀನ ರೀತಿಗಳನ್ನು ಬಳಕೆಗೆ ತಂದ ರಂಗಭೂಮಿಯಾದುದರಿಂದ 'ಮಾಡ್ರರ್ನ್ ಥಿಯೇಟರ್' ಎಂದೂ ಕರೆಯುವುದುಂಟು. ನಾಟಕವನ್ನೇ ವೃತ್ತಿಯಾಗಿ ಅವಲಂಬಿಸುವ ವಿಚಾರ ನಮ್ಮ ದೇಶಕ್ಕೆ ಹೊಸದು. ಪಾಶ್ಚಾತ್ಯ ಸಂಪ್ರದಾಯ ಹಾಗೂ ಪ್ರಭಾವಗಳ ಪ್ರತಿಬಿಂಬವಿದು. ಹಿಂದಿನ ಕಾಲದ ನಮ್ಮ 'ನಟ' ಉದರಂಭರಣಕ್ಕೆ ರಂಗವನ್ನು ಅವಲಂಬಿಸಿದವನಲ್ಲ. ಸಾಧಾರಣವಾಗಿ ಜನಪದ ರಂಗದ ನಟನು ವೃತ್ತಿಯಲ್ಲಿ ರೈತ, ಆಸ್ಥಾನ ರಂಗದನಟ, ಮೂಲತಃ ಸಂಗೀತಗಾರ ಅಥವಾ ಭಾಷಾಪಂಡಿತ; ಪ್ರಾಚೀನ ನಾಟಕರಂಗದ ಧ್ಯೇಯವಾದರೂ ದ್ರವ್ಯ ಸಂಪಾದನೆಯಾಗಿರಲಿಲ್ಲ. ಇಂದಿನ ಅರ್ಥದ 'ವೃತ್ತಿರಂಗಭೂಮಿ' ಹಿಂದಿನ ಕಾಲದಲ್ಲಿ ಇರಲಿಲ್ಲ."[೧೩]

"ಹಲವಾರು ನಟ ನಟಿಯರನ್ನೊಳಗೊಂಡ ವ್ಯವಸ್ಥಿತ ಮಂಡಲಿಯೊಂದು ನಾಟಕ ಪ್ರದರ್ಶನದಿಂದ ದುಡಿದು ಹಣಸಂಪಾದಿಸಿ ಬದುಕುತ್ತಿದ್ದ ಉದಾಹರಣೆಗಳು ಪ್ರಾಚೀನಭಾರತದಲ್ಲಿ ಇಲ್ಲವೇ ಇಲ್ಲ. ಪಾಶ್ಚಾತ್ಯ ನಾಟಕ ಕಂಪನಿಗಳ ಮಾದರಿಯನ್ನನುಸರಿಸಿ ಕಲ್ಕತ್ತಾ, ಮುಂಬಯಿ ಮುಂತಾದ ನಗರಗಳಲ್ಲಿ ಆರಂಭವಾದ ಈ ವೃತ್ತಿರಂಗಭೂಮಿ ಭಾರತದ ಇತರೆ ಪ್ರದೇಶಗಳಿಗೂ ವ್ಯಾಪಿಸಿತು."[೧೪] ಕನ್ನಡ ನಾಡಿನಲ್ಲಿ ಇಂತಹ ಪ್ರದರ್ಶನಕ್ಕೆ ಪ್ರೇರಣೆ ಇತ್ತುದು ಸಾಂಗ್ಲಿಯ 'ಮಹಾರಾಷ್ಟ್ರ ನಾಟಕ ಮಂಡಳಿ'ಯೊಂದು. ಆ ನಾಟಕಮಂಡಳಿ ಉತ್ತರ ಕರ್ನಾಟಕದ ಧಾರವಾಡ, ಬಿಜಾಪುರ, ಬೆಳಗಾಂಜಿಲ್ಲೆಗಳಲ್ಲಿ ತನ್ನ ನಾಟಕ ಪ್ರದರ್ಶನಗಳಿಂದ ಅಪಾರವಾದ ಹಣವನ್ನು ಕೀರ್ತಿಯನ್ನು ಸಂಪಾದಿಸಿದುದ್ದನ್ನು ಕಂಡು ೧೮೭೭ರಲ್ಲಿ ಬಾಳಾಚಾರ್ಯ ಸಕ್ಕರಿ, ಶಾಂತ ಕವಿಗಳು ಕೆಲವು ಕನ್ನಡಾಭಿಮಾನಿಗಳ ಸಹಾಯದಿಂದ 'ವೀರ ನಾರಾಯಣ ಪ್ರಸಾದಿತ ಕೃತಪುರ ನಾಟಕ ಮಂಡಳಿ' ಯನ್ನು ಸ್ಥಾಪಿಸಿ ತಾವೇ ಬರೆದಿದ್ದ 'ವತ್ಸಲಾ ಹರಣ' 'ಕೀಚಕ ವಧೆ' 'ಬಾಣಾಸುರ' ಇತ್ಯಾದಿ ನಾಟಕಗಳನ್ನಲ್ಲದೆ ಇತರೆ ಕೆಲವು ನಾಟಕಗಳನ್ನು ಪ್ರದರ್ಶಿಸುತ್ತಿದ್ದರು. ಈವರೆಗೂ ಮರಾಠಿ, ಪಾರ್ಸಿ ನಾಟಕಗಳನ್ನು ನೋಡಿದ್ದ ಕನ್ನಡಿಗರು

---

೧೩. ಡಾ॥. ಎಚ್.ಕೆ. ರಂಗನಾಥ್-ಕರ್ನಾಟಕ ರಂಗಭೂಮಿ.ಪುಟ-೧೧೫೧.
೧೪. ಡಾ. ಕೆ. ಮರುಳಸಿದ್ದಪ್ಪ-ಆಧುನಿಕ ಕನ್ನಡ ನಾಟಕ.ಪುಟ, ೩೭

ಸ್ವಭಾಷೆಯಲ್ಲಿ ಪ್ರದರ್ಶನಗೊಂಡ ನಾಟಕಗಳನ್ನು ಮೆಚ್ಚಿ ಅಪಾರವಾದ ಪ್ರೋತ್ಸಾಹವನ್ನಿತ್ತರು. ಇದರಿಂದ ಉತ್ತರ ಕರ್ನಾಟಕದ ಗಡಿಯಲ್ಲಿದ್ದ ಮರಾಠಿಗರ ಸಾಂಸ್ಕೃತಿಕ ಆಕ್ರಮಣ ತಗ್ಗಿತು.

ಇದೇ ಕಾಲಘಟ್ಟದಲ್ಲಿ ಮೈಸೂರಿನ ಮಹಾರಾಜರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರು ಒಮ್ಮೆ ಬಾಂಬೆಗೆ ಹೋಗಿದ್ದಾಗ ಅಲ್ಲಿ 'ಬಾಲವಾಲ' ಎಂಬ ಪಾರ್ಸಿ ನಾಟಕವೊಂದನ್ನು ಕಂಡು ಮನಸೋತು ೧೮೭೯ ರಲ್ಲಿ 'ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ' ವನ್ನು ಸ್ಥಾಪಿಸಿದರು. ಈ ನಾಟಕ ಮಂಡಳಿಯು ೧೯೧೭ ರವರೆಗೆ ಮೈಸೂರು ಅರಸರ ಪೋಷಣೆಯಲ್ಲಿ ಬೆಳೆಯಿತು. ಈ ನಡುವೆ ಸಿ.ಆರ್.ರಘುನಾಥ ರಾಯರ ನೇತೃತ್ವದಲ್ಲಿ ೧೮೮೮ರಲ್ಲಿ ಆರಂಭವಾದ 'ಶ್ರೀ ಶಾಕುಂತಲ ಕರ್ನಾಟಕ ನಾಟಕ ಸಭಾ' ಕನ್ನಡ ರಂಗಭೂಮಿಯನ್ನು ಮತ್ತಷ್ಟು ಬೆಳೆಸಿತು. ಆದರೆ ಈ ಎರಡು ನಾಟಕ ಮಂಡಳಿಗಳ ನಡುವಿನ ಪರಸ್ಪರ ವೈಮನಸ್ಸಿನಿಂದ ಶಾಕುಂತಲ ನಾಟಕ ಸಭಾ ಅತಿ ಶೀಘ್ರದಲ್ಲಿ ಅವನತಿ ಹೊಂದಿತು. ಇಷ್ಟಾದರೂ ಕನ್ನಡ ರಂಗಭೂಮಿಯು ಸುವರ್ಣ ಯುಗದತ್ತ ದಾಪುಗಾಲು ಹಾಕಲು 'ರಾಜಧಾನಿ ನಾಟಕ ಮಂಡಲಿ', 'ಗೊಲ್ಲರ ಪೇಟೆ ನಾಟಕ ಸಭಾ', ಸಂಗೀತ ಸಾಗರ ಚಂದ್ರೋದಯ ಸಭೆ', 'ಸಿಟಿ ಅಪೇರಾ' ಮತ್ತು ೧೮೮೪ ರಲ್ಲಿ ಚಂದಣ್ಣ ನವರ ನೇತೃತ್ವದಲ್ಲಿ ಸ್ಥಾಪನೆಯಾದ 'ಗುಬ್ಬಿ ಶ್ರೀ ಚನ್ನಬಸವೇಶ್ವರ ಕೃಪಾಪೋಷಿತ ನಾಟಕ ಸಂಘ' ಮುಂತಾದವುಗಳು ಅಮೂಲ್ಯ ಕಾಣಿಕೆಯನ್ನಿತ್ತವು. ಈ ಕಂಪನಿಯ ವೀರಣ್ಣನೆಂಬ ಬಾಲಕನು ಮುಂದೆ ಮಹಾವೃಕ್ಷದಂತೆ ಬೆಳೆದು ಕನ್ನಡ ರಂಗಭೂಮಿಯನ್ನು ಖ್ಯಾತಿಯ ಶಿಖರಕ್ಕೇರಿಸಿದನು.

"ಕನ್ನಡ ನಾಡಿನಲ್ಲಿ ಇದುವರೆಗೆ ಹುಟ್ಟಿರುವ ನಾಟಕ ಮಂಡಳಿಗಳಲ್ಲಿ ವೀರಣ್ಣನವರ ನಾಟಕ ಮಂಡಲಿಯಷ್ಟು ಸುಧೀರ್ಘಕಾಲ ಬಾಳಿಬದುಕಿದ ನಾಟಕ ಮಂಡಲಿ ಮತ್ತೊಂದಿಲ್ಲ. ಕನ್ನಡ ನಾಡಿನಲ್ಲಿ ನಾಟಕ ಕಲಾಪರಿಣತರೆನಿಸಿದ ಮಹಾಪುರುಷರೆಲ್ಲ – ಎ.ವಿ. ವರದಚಾರ್ಯರನ್ನು ಹೊರತುಪಡಿಸಿ – ಒಂದಲ್ಲ ಒಂದು ಕಾಲದಲ್ಲಿ ಈ ನಾಟಕ ಮಂಡಲಿಯಲ್ಲಿ ಇದ್ದವರೇ. ಗಂಗಾಧರರಾವ್, ನಾಗೇಶರಾವ್, ಸುಂದರಮ್ಮ, ಅಶ್ವತ್ಥಮ್ಮ, ಜಯಮ್ಮ, ನಾಗೇಂದ್ರರಾವ್, ರಾಜ್‌ಕುಮಾರ್, ಜಿ.ವಿ.ಅಯ್ಯರ್, ನರಸಿಂಹರಾಜು...... ಇತ್ಯಾದಿ ಇತ್ಯಾದಿಗಳು ಬರಿಯ ಹೆಸರಲ್ಲ. ನಾಟಕದ ಮೂಸೆಯಿಂದ ಹೊರಬಂದ ಅಚ್ಚ ಬಂಗಾರದ ದಿವ್ಯ ಸುಂದರ ವಿಗ್ರಹಗಳು."[೧೫]

ರಂಗಭೂಮಿಗಾಗಿಯೇ ನಾಟಕ ಬರೆದವರಲ್ಲಿ ಬೆಳ್ಳಾವೆ ನರಹರಿ ಶಾಸ್ತ್ರೀಗಳದು ಮರೆಯಲಾಗದ ಹೆಸರು. ಕೃಷ್ಣಲೀಲಾ, ತುಕಾರಾಂ, ಶ್ರೀಕೃಷ್ಣಾಪಾರಿಜಾತ ಮುಂತಾದ ರಂಗಕೃತಿಗಳು ಯಶಸ್ವಿ ಪ್ರಯೋಗಕಂಡವು. ಇವರ ದಾರಿಯನ್ನೇ ಅನುಸರಿಸಿ ನಂಜನಗೂಡು ಶ್ರೀಕಂಠಶಾಸ್ತ್ರಿಗಳು ಸೀತಾಪರಿಣಯ, ರಾಜಸೂಯಯಾಗ ಮೊದಲಾದ

---

೧೫. ತ.ಸು.ಶಾಮರಾಯ–ಕನ್ನಡ ರಂಗಭೂಮಿ ನಡೆದುಬಂದ ದಾರಿ–ವೃತ್ತಿರಂಗಭೂಮಿ ಕಂಪನಿಗಳು.ಪುಟ–೩೮

ನಾಟಕಗಳನ್ನು ರಚಿಸಿದರು. ಬಿ.ಪುಟ್ಟಸ್ವಾಮಯ್ಯನವರ ಕುರುಕ್ಷೇತ್ರ ಮತ್ತು ದಶಾವತಾರ ನಾಟಕಗಳು ೨೦೦೦ಕ್ಕೂ ಹೆಚ್ಚು ಪ್ರಯೋಗಗಳನ್ನು ಕಂಡ ಪೌರಾಣಿಕ ನಾಟಕವೆಂದು ವೃತ್ತಿರಂಗಭೂಮಿಯ ಚರಿತ್ರೆಯಲ್ಲಿ ದಾಖಲಾಗಿದೆ.

" ಗ್ರೀಕ್ ಇಂಗ್ಲೀಷ್ ಮೊದಲಾದ ಸಾಹಿತ್ಯಗಳನ್ನು ಅಭ್ಯಸಿಸಿದವರು ಅವುಗಳ ಪ್ರಭಾವಕ್ಕೆ ಒಳಗಾದರು. ಓದಲೂ, ಆಡಲೂ ಸಾಧ್ಯವಾಗುವಂಥ ರೂಪಾಂತರಗಳು ಅನುವಾದಗಳು ಮತ್ತು ಸ್ವತಂತ್ರ ನಾಟಕಗಳು ಮೂಡಿಬಂದವು. ಬಿ.ಎಂ.ಶ್ರೀ., ಕುವೆಂಪು, ಮಾಸ್ತಿ, ಜಿ.ಪಿ.ರಾಜರತ್ನಂ, ಎಲ್.ಗುಂಡಪ್ಪ, ಡಿ.ವಿ.ಜಿ. ವಿ.ಸೀ. ಕಡಂಗೋಡ್ಲು ಶಂಕರಭಟ್ಟ ಮೊದಲಾದವರು ರಚಿಸಿದ ನಾಟಕಗಳು ಈ ಗುಂಪಿಗೆ ಸೇರುತ್ತವೆ."[೧೬]

ಕೈಲಾಸಂ, ಶ್ರೀರಂಗ, ಪರ್ವತವಾಣಿ ಮುಂತಾದವರು ಸಾಮಾಜಿಕ ಸಮಸ್ಯೆಗಳನ್ನು ಚಿತ್ರಿಸಿ ನಾಟಕಗಳನ್ನು ರಚಿಸಿದರು. ಮಾಸ್ತಿ ಮತ್ತು ಕುವೆಂಪುರವರು ಸಾಹಿತ್ಯ ಮತ್ತು ರಂಗಭೂಮಿಯ ದೃಷ್ಟಿಯಿಂದ ಮಹತ್ವದ ಕೃತಿಗಳನ್ನು ರಚಿಸಿದರು. ಚಂದ್ರಶೇಖರ ಕಂಬಾರ, ಲಂಕೇಶ, ಗಿರೀಶ್ ಕಾರ್ನಾಡರ ನಾಟಕ ಕೃತಿಗಳು ಸಹ ಕನ್ನಡ ರಂಗಭೂಮಿಯನ್ನು ಮತ್ತಷ್ಟು ಬೆಳಗಿಸಿದವು.

ಚಲನಚಿತ್ರ ರಂಗದ ಶರವೇಗದ ಮುನ್ನಡೆಯಲ್ಲಿ ವೃತ್ತಿ ರಂಗಭೂಮಿಯು ಹಿಂದುಳಿಯುತ್ತಿರುವುದು ಕಟುಸತ್ಯ. ಇತ್ತೀಚೆಗೆ ಕೆಲವು ನಾಟಕ ಕಂಪೆನಿಗಳು ಜನರಲ್ಲಿ ಉತ್ತಮ ಅಭಿರುಚಿಯನ್ನು ಬೆಳೆಸುವ ಬದಲಾಗಿ ಜನರ ಇಚ್ಛೆಗೆ ತಕ್ಕಂತೆ ಬದಲಾಗುತ್ತಿದೆ. ಹಣ ಸಂಪಾದನೆಯೇ ಕೇಂದ್ರವಾಗಿದೆ. ವಾಸ್ತವಿಕತೆಯ ಹೆಸರಿನಲ್ಲಿ ನಗ್ನತೆಯಿಂದ ನರ್ತನ ಮಾಡುವ ಲಘು ವಿನೋದಗಳು, ಅಗ್ಗದ ಉದ್ರೇಕಗಳು. ದ್ವಂದ್ವಾರ್ಥಗಳು ನುಸುಳುತ್ತಿವೆ. ಸಾಮಾಜಿಕ, ರಾಜಕೀಯ, ಆರ್ಥಿಕ ಪಲ್ಲಟಗಳಿಗೆ ಅನುಗುಣವಾಗಿ ನಮ್ಮ ರಂಗಭೂಮಿಯ ಧನಾತ್ಮಕವಾದ, ಸೃಜನಾತ್ಮಕವಾದ ಹೊಸ ಹೊಸ ಪ್ರಭಾವ, ಪ್ರೇರಣೆಗಳನ್ನು ಮೈಗೂಡಿಕೊಂಡು ಈ ನಾಡಿನ ಸಾಂಸ್ಕೃತಿಕ ಜೀವನದ ಅಂಗವಾಗಿ, ಅರ್ಥಪೂರ್ಣ ಮಾಧ್ಯಮವಾಗಿ ರೂಪುಗೊಳ್ಳಬೇಕಾದ ಅನಿವಾರ್ಯತೆ ಎದುರಾಗಿದೆ.

**ಹವ್ಯಾಸಿ ರಂಗಭೂಮಿ:**

"ಕನ್ನಡ ಜನಪದ ರಂಗಭೂಮಿಗೆ ಒಂದು ಪರಂಪರೆ ಇದೆ. ಇತಿಹಾಸ ಇಲ್ಲ, ಕನ್ನಡ ಶಿಷ್ಟರಂಗಕ್ಕೆ ಒಂದು ಇತಿಹಾಸ ಇದೆ, ಪರಂಪರೆ ಇಲ್ಲ, ಅದು ಅತ್ಯಂತ ಪ್ರಾಚೀನ, ಇದು ತುಂಬಾ ಅರ್ವಾಚೀನ ಒಂದು ಕನ್ನಡ ಸಂಸ್ಕೃತಿಯ ನೈಜ ನೆಲೆಗಟ್ಟಿನ ಮೇಲೆ ನಿಂತಿದ್ದರೆ, ಮತ್ತೊಂದು ಆರ್ಯ, ಆಂಗ್ಲ ಹಾಗೂ ಇನ್ನಿತರ ಸಂಸ್ಕೃತಿಗಳ ರೆಕ್ಕೆ ಕಟ್ಟಿಕೊಂಡು ಹಾರುತ್ತಿದೆ. ಆದರೂ ಸೂತ್ರಧಾರನ ಪ್ರವೇಶ, ಜವನಿಕೆಯ ಅವತಾರ ಮೊದಲಾದವುಗಳಲ್ಲಿ ಶಿಷ್ಟರಂಗಭೂಮಿ, ಜನಪದರಂಗಭೂಮಿಗೆ ಋಣಿಯಾಗಿರುವುದು

---

೧೬ .ತ.ಸು.ಶಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ.ಪುಟ-೨೬೩

ಸತ್ಯ. ಕಾರಣ ಯಾವುದೇ ಶಿಷ್ಟಕಲೆಇರಲಿ ಅದರ ಸೃಷ್ಟಿಗೆ ಜಾನಪದವೇ ಮಾತೃಗರ್ಭ"[೧೭].

ಆಧುನಿಕ ಕನ್ನಡ ನಾಟಕ ಮತ್ತು ಹವ್ಯಾಸಿ ರಂಗಭೂಮಿ ಎರಡೂ ಒಂದೇ ನಾಣ್ಯದ ಎರಡು ಮುಖಗಳು. ಅವುಗಳಿಗೆ ಪ್ರತ್ಯೇಕ ಅಸ್ತಿತ್ವವಿಲ್ಲ. ಜೀವ ದೇಹದಂತೆ ಅವೆರಡೂ ಅಭಿನ್ನವಾದವು. ಆಧುನಿಕ ಕನ್ನಡ ನಾಟಕಕ್ಕೆ ಪ್ರಯೋಗದ ಮೂಲಕ ಸಾರ್ಥಕವಾಗಲು ಅವಕಾಶಕಲ್ಪಿಸಿದ ರಂಗಭೂಮಿಯೇ ಹವ್ಯಾಸಿ ರಂಗಭೂಮಿ. ಈಗಾಗಲೆ ಚರ್ಚಿಸಿರುವಂತೆ ಹವ್ಯಾಸಿ ರಂಗಭೂಮಿಯ ಹುಟ್ಟಿಗೆ ಮುಖ್ಯಕಾರಣ ವೃತ್ತಿ ರಂಗಭೂಮಿಯನ್ನು ಕುರಿತ ವಿದ್ಯಾವಂತ ಮಧ್ಯಮವರ್ಗದ ಅತೃಪ್ತಿ. ಪುರಾಣ ಕಥೆಗಳನ್ನು ವರ್ಣರಂಜಿತವಾಗಿ ಹಾಡು ಕುಣಿತಗಳ ಸಹಾಯದಿಂದ ನಾಟಕ ರೂಪದಲ್ಲಿ ಪ್ರದರ್ಶಿಸುತ್ತಿದ್ದ ಅಂದಿನ ವೃತ್ತಿರಂಗಭೂಮಿ ಸಮಕಾಲೀನ ಜನಜೀವನಕ್ಕೆ ಹೊಂದುವಂತೆ ಕಂಡುಬರಲಿಲ್ಲ. ಇಂಗ್ಲಿಷ್ ವಿದ್ಯಾಭ್ಯಾಸದ ಪರಿಣಾಮವಾಗಿ ಎಚ್ಚೆತ್ತಿದ್ದ ಮಧ್ಯಮ ವರ್ಗ ತನ್ನ ಆಶೋತ್ತರಗಳನ್ನು ಪ್ರತಿಬಿಂಬಿಸಲಿಲ್ಲ. ಹೀಗಾಗಿ ಈ ವರ್ಗವು 'ಹವ್ಯಾಸಿ ರಂಗಭೂಮಿ' ಎಂಬ ವೇದಿಕೆಯನ್ನು ರೂಪಿಸಿಕೊಂಡಿತು. ಈ ಜನರಲ್ಲಿ ನಾಟಕವು ಒಂದು ಹವ್ಯಾಸವಾಗಿಬೆಳೆಯಿತು. ನಾಟಕವನ್ನು ಆಡುವ ಸಂತೋಷ, ಆಡಿಸುವ ಸಂತೋಷ ಮತ್ತು ನೋಡುವ ಸಂತೋಷ-ಈ ಮೂರೂ ಹವ್ಯಾಸಿ ರಂಗಭೂಮಿಯಲ್ಲಿ ಪರಸ್ಪರ ಪೂರಕವಾಗಿ ಬೆಳೆಯಿತು. "ಹವ್ಯಾಸಿ ರಂಗಭೂಮಿಗೆ ಶಾಲಾ ಕಾಲೇಜುಗಳೇ ಆಶ್ರಯ ಕೇಂದ್ರಗಳಾದವು. ವಿದ್ಯಾರ್ಥಿಗಳು ನಟರು; ಅಧ್ಯಾಪಕರೇ ನಿರ್ದೇಶಕರು,...... ಬಹು ತಡವಾಗಿ ಅಲ್ಲಲ್ಲಿ ಅದೂ ಮುಖ್ಯವಾಗಿ ಬೆಂಗಳೂರು ನಗರದಲ್ಲಿ ಕೈಗಾರಿಕೆಗಳು ಮತ್ತು ಸರ್ಕಾರಿ ಕಛೇರಿಗಳ ನೌಕರರಿಂದ ಹವ್ಯಾಸಿ ರಂಗಭೂಮಿ ಬಲಪಡೆಯಿತು"[೧೮]

ಧಾರವಾಡದಲ್ಲಿ ಮುದವೀಡು ಕೃಷ್ಣರಾಯರ ನೇತೃತ್ವದಲ್ಲಿ ಕ್ರಿ.ಶ.೧೯೦೫ರಲ್ಲಿ ಹುಟ್ಟಿಕೊಂಡ, 'ಭಾರತ ಕಲೋತ್ತೇಜಕ ಸಂಗೀತಸಮಾಜವು ಐತಿಹಾಸಿಕವಾಗಿ ಕರ್ನಾಟಕದ ಮೊದಲ ಹವ್ಯಾಸಿ ಮಂಡಳಿ ಎಂದು ಗುರುತಿಸಲ್ಪಟ್ಟಿದೆ. ಚುರಮುರಿಯವರ 'ಶಾಕುಂತಲ'ದ ಅನುವಾದವೇ ಈ ಮಂಡಳಿಯ ಮೊದಲ ಪ್ರಯೋಗ. ಬೆಂಗಳೂರಿನ 'ಅಮೇಚೂರ್ ಡ್ರಮಾಟಿಕ್ ಅಸೋಸಿಯೇಷನ್ (೧೯೦೯)ಕನ್ನಡ ಹವ್ಯಾಸಿ ರಂಗಭೂಮಿಯಲ್ಲಿ ವರ್ಣಮಯವಾದ ಚರಿತ್ರೆ ನಿರ್ಮಿಸಿದ ಮೊತ್ತಮೊದಲ ಸಂಸ್ಥೆ. ಮೈಸೂರಿನ 'ಸಾಹಿತ್ಯ ನಾಟಕ ಸಂಘ' (೧೯೯೯)ವು ದಕ್ಷಿಣ ಕರ್ನಾಟಕದ ಅತ್ಯಂತ ಪ್ರಸಿದ್ಧ ಹವ್ಯಾಸಿ ಮಂಡಳಿ ಎಂದೂ ಗುರುತಿಸಲ್ಪಟ್ಟಿತು.

ಹವ್ಯಾಸಿ ರಂಗಭೂಮಿಯನ್ನೇ ದೃಷ್ಟಿಯಲ್ಲಿಟ್ಟುಕೊಂಡು ನಾಟಕರಚನೆ ಮಾಡಿದವರಲ್ಲಿ ಕೈಲಾಸಂ, ಶ್ರೀರಂಗ, ದಾಶರಥಿ ದೀಕ್ಷಿತ್, ಎ.ಎಸ್.ಮೂರ್ತಿ,

---

೧೭. ಡಾ॥ಸಾ.ಶಿ. ಮರುಳಯ್ಯ. ಪರ್ವತವಾಣಿಯವರ ನಾಟಕಗಳು: ಒಂದು ಸಮೀಕ್ಷೆ, ಪುಟ ೨೫೭

೧೮. ಡಾ.ಕೆ.ಮರುಳಸಿದ್ಧಪ್ಪ-ಆಧುನಿಕ ಕನ್ನಡ ನಾಟಕ.ಪುಟ-೨೬೪-೨೬೫

ನಾ.ಕಸ್ತೂರಿ, ಎನ್ಕೆ ಮುಂತಾದವರು ಪ್ರಮುಖರು. ಡಾ.ಹೆಚ್.ಕೆ.ರಂಗನಾಥ್‌ರವರು ಹವ್ಯಾಸಿ ರಂಗಭೂಮಿಯ ಧನಾತ್ಮಕತೆಯನ್ನು ತಿಳಿಸುತ್ತಾ "ಹವ್ಯಾಸಿ ರಂಗಭೂಮಿಯಲ್ಲಿ ಒಡೆಯ-ದುಡಿಯುವವ ಎಂಬ ಭಾವನೆ ಇಲ್ಲವಾದುದರಿಂದ, ನಾಲ್ಕಾರುಮಂದಿ ನಟರೇ, ನಾಟಕಕಾರರೇ ಒಟ್ಟಾಗಿ ಕೂಡುವುದರಿಂದ, ಕೂಡಿ ಆಡುವುದರಿಂದ, ಆಡಿ ವಿಮರ್ಶೆ ಮಾಡುವುದರಿಂದ ರಂಗದಲ್ಲಿ ಪ್ರಗತಿಯನ್ನು ಸಾಧಿಸುವುದು ಸಾಧ್ಯವಿದೆ. ವಿಲಾಸಿ ರಂಗಭೂಮಿಯ ಕಲಾವಿದರು ವೃತ್ತಿಕಲಾವಿದರಿಗಿಂತ ಸುಶಿಕ್ಷಿತರು, ರಂಗಕಲೆಯ ಬಗೆಗೆ ಅಭ್ಯಾಸಮಾಡಿದವರು ಅಲ್ಲದೆ ರಂಗದಲ್ಲಿ ಹೊಸ ಪ್ರಯೋಗಗಳನ್ನು ನಡೆಸಲು ಉತ್ಸಾಹ ತಳೆದವರು"[೧೯] ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಸಾ.ಶಿ.ಮರುಳಯ್ಯನವರು "ಕಲೆ ಕಸುಬಾಗಬೇಕು, ಬರಿಯ ಹವ್ಯಾಸವಾದರೆ ಸಾಲದು, ವೃತ್ತಿಯಾದಾಗ ಮಾತ್ರ ಕಲೆ ಬಹುಕಾಲ ಬದುಕುತ್ತದೆ; ಹವ್ಯಾಸವಾದರೆ ನಡೆಯುವ ತನಕ ನಾಣ್ಯ ಆಗುತ್ತೆ. ವೃತ್ತಿಯದು ಗರತಿಯ ಸಂಸಾರ, ಹವ್ಯಾಸಿಯದು ಸೂಳೆಯ ಸಹವಾಸ. ಸಮಾಜದಲ್ಲಿ ಎರಡೂ ಇದೆ. ಕನ್ನಡ ರಂಗಭೂಮಿಯಲ್ಲೂ (ಜಾನಪದ ಹಾಗೂ ಶಿಷ್ಟ-ಎರಡರಲ್ಲೂ) ವೃತ್ತಿ ಮತ್ತು ಹವ್ಯಾಸಿ ಎರಡೂ ಇವೆ. ಜನಪದ ಆಟವನ್ನು ಕೆಲವರು ತಮ್ಮ ಪಿತ್ರಾರ್ಜಿತ ಆಸ್ತಿಯೆಂದು ಭಾವಿಸಿ ಬೆಳೆಸಿಕೊಂಡು ಬಂದದ್ದುಂಟು. ಅದು ಗ್ರಾಮೀಣ ಪ್ರದೇಶಗಳಲ್ಲಿ, ಊರಮಧ್ಯದ ಬೀದಿಗಳಲ್ಲಿ ಇಲ್ಲವೇ ಊರಾಚೆಯ ಬಯಲಿನಲ್ಲಿ ಮೆರೆದಾಡಿದರೆ, ಶಿಷ್ಟನಾಟಕವು ರಾಜಾಸ್ಥಾನ, ಅರಮನೆ, ಅಗ್ರಹಾರಗಳಲ್ಲಿ ಪ್ರದರ್ಶನಪಡೆಯಿತು. ಇಂದು ಹಲವು ನಾಟಕ ತಂಡಗಳು ಹವ್ಯಾಸಿ ಸಂಸ್ಥೆಗಳೆಂದು ಹೇಳಿಕೊಂಡು ರವೀಂದ್ರ ಕಲಾಕ್ಷೇತ್ರದಲ್ಲಿ ರಂಗಪ್ರದರ್ಶನ ಕೊಡುತ್ತಿವೆ. ಆದರೆ ಅವು ಹವ್ಯಾಸಿಗಳಲ್ಲ, ಒಂದು ವಿಧದಲ್ಲಿ ಅವು ವೃತ್ತಿರಂಗಸಂಸ್ಥೆಗಳು. ಟಿಕೇಟು ಹಚ್ಚಿ, ಹಣಸಂಪಾದನೆಯ ಕಸುಬಿಗಿಳಿದದ್ದುದರಿಂದ ಅವು ವೃತ್ತಿರಂಗಸಂಸ್ಥೆಯ ವರ್ಗಕ್ಕೆ ಸೇರುತ್ತವೆ. ಆದರೆ ಕಲೆಯ ಶುದ್ಧ ಸ್ವರೂಪ ನಮಗೆ ಹೇಗೆ ಸಿಗುತ್ತಿಲ್ಲವೋ ಹಾಗೆ ಕನ್ನಡ ರಂಗಭೂಮಿಯ ಶುದ್ಧ ವಿಭಜನೆಯೂ ಸಾಧ್ಯವಾಗುತ್ತಿಲ್ಲ. ಆದರೂ ಪೈಪೋಟಿ, ಕಿತ್ತಾಟ, ದ್ವೇಷಾಸೂಯೆ ಇವಾವೂ ಇಲ್ಲದ, ಹಣದ ಆಮಿಷವಿಲ್ಲದ ಕೇವಲ ಆತ್ಮಾನಂದಕ್ಕಾಗಿಯೇ ಆಡಿಕೊಳ್ಳುವಂಥವು ಹವ್ಯಾಸಿಗಳು; ಆ ಎಲ್ಲ ಕಲ್ಯಾಣ ಗುಣಗಳನ್ನೂ ಉಳ್ಳವು ವೃತ್ತಿ ಸಂಸ್ಥೆಗಳು"[೨೦] ಎಂದು ತುಸು ನಿಷ್ಠುರವಾಗಿಯೇ ಹೇಳಿದ್ದಾರೆ.

ನಾಟಕವೆಂಬುದೊಂದು ರಮ್ಯಕಲೆ, 'ಊರಿಗೆ ದಾರಿಯನು ಯಾರು ತೋರಿದರೇನು?' ಎಂಬ ಗಾದೆಯಂತೆ ಜನಪದ, ವೃತ್ತಿ ಅಥವಾ ಹವ್ಯಾಸಿ ಹೀಗೆ ಯಾವುದೇ ಪ್ರಕಾರದ ರಂಗಭೂಮಿಯಿಂದಾದರೂ ಸರಿಯೇ ಈ ಅದ್ಭುತ ಕಲೆಯು ಉಳಿದು ಬೆಳೆಯ ಬೇಕಾದುದಷ್ಟೇ ನಮಗೆ ಮುಖ್ಯ.

---

೧೯.ಡಾ.ಎಚ್.ಕೆ.ರಂಗನಾಥ. ಕರ್ನಾಟಕ ರಂಗಭೂಮಿ - ಪುಟ-೩೦೫,೩೦೬

೨೦.ಡಾ.ಸಾ.ಶಿ.ಮರುಳಯ್ಯ-ಕನ್ನಡ ರಂಗಭೂಮಿ ನಡೆದು ಬಂದದಾರಿ-ಪರ್ವತ ವಾಣಿಯವರ ನಾಟಕಗಳು.ಪುಟ : ೩೫೭.

## ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ:

ಕನ್ನಡ ಸಾಹಿತ್ಯ ಪ್ರಕಾರಗಳ ಪೈಕಿ ಅತ್ಯಂತ ತಡವಾಗಿ ಹುಟ್ಟಿದ್ದು ನಾಟಕ. ಹೊರಗಿನ ಪ್ರೇರಣೆ ಹಾಗೂ ತನ್ನೊಳಗಿನ ಸತ್ವದಿಂದ ಇಂದು ಕನ್ನಡ ನಾಟಕಸಾಹಿತ್ಯವು ವಿಫುಲವಾಗಿ ಬೆಳೆಯುತ್ತಿದೆಯಾದರೂ, ನಾಟಕವನ್ನು ಸಾಹಿತ್ಯ ಪ್ರಕಾರವಾಗಿ ನೋಡುತ್ತ ಅಧ್ಯಯನ ನಡೆಸಿರುವಂತೆ, 'ರಂಗಭೂಮಿ'ಯಾಗಿ ನಾಟಕದ ವ್ಯವಸ್ಥಿತ ಅಭ್ಯಾಸ ಇನ್ನೂ ಆಗಬೇಕಿದೆ. ಹೀಗಿದ್ದರೂ ಈ ನಿಟ್ಟಿನಲ್ಲಿ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆಯನ್ನು ಈ ಕೆಳಕಂಡಂತೆ ಸ್ಪಷ್ಟಪಡಿಸಬಹುದು.

ತ.ಸು.ಶಾಮರಾಯರ 'ಕನ್ನಡ ನಾಟಕ'ವು (೧೯೬೨) ನಾಟಕಗಳ ಚಾರಿತ್ರಿಕ ಸಾಂಸ್ಕೃತಿಕ ಅಧ್ಯಯನವಾಗಿ ವಿದ್ವಾಂಸರ ಮೆಚ್ಚುಗೆ ಪಡೆದ ಗ್ರಂಥ. ಶ್ರೀಯುತರು ರೂಪಕ ಕಲೆಯ ಆರಂಭ, ಕನ್ನಡ ನಾಟಕಗಳು, ದೇಶೀಯ ನಾಟಕಗಳು ಮತ್ತು ಪೌರಾಣಿಕ ನಾಟಕಗಳ ಬಗ್ಗೆ ವಿಪುಲವಾದ ಮಾಹಿತಿಗಳ ಹಿನ್ನೆಲೆಯಲ್ಲಿ ಮೊದಲಭಾಗದಲ್ಲಿ ಚರ್ಚಿಸಿದ್ದಾರೆ. ಅಲ್ಲದೆ ಜನಪದ ಸಂಪ್ರದಾಯಗಳ ಹಿನ್ನೆಲೆಯಲ್ಲಿ ನಾಟಕದ ಉಗಮ, ಸ್ವರೂಪ, ಇತ್ಯಾದಿಗಳಬಗ್ಗೆ ಉತ್ತಮವಾದ ಅಧ್ಯಯನಕ್ಕೆ ಪೂರ್ವ ಪೀಠಿಕೆಗಳನ್ನೆಲ್ಲ ಒದಗಿಸಿಕೊಟ್ಟಿದ್ದಾರೆ. ಎರಡನೇ ಭಾಗದಲ್ಲಿ ಆಧುನಿಕ ನಾಟಕಗಳು, ಸಾಮಾಜಿಕ ನಾಟಕಗಳು, ಐತಿಹಾಸಿಕ ನಾಟಕಗಳು, ಗೀತ ನಾಟಕಗಳ ಬಗ್ಗೆ ವಿಶೇಷವಾದ ಬೆಳಕು ಚೆಲ್ಲಿದ್ದಾರೆ. ಕನ್ನಡ ನಾಟಕಗಳ ಅಧ್ಯಯನಕ್ಕೆ ಇದೊಂದು ಪ್ರಮುಖ ಆಕರ ಗ್ರಂಥವಾಗಿದೆ.

ಡಾ.ಎಚ್.ಕೆ. ರಂಗನಾಥ್ ಅವರ 'ದಿ ಕರ್ನಾಟಕ ಥಿಯೇಟರ್' ಎಂಬ ಇಂಗ್ಲೀಷ್ ಪ್ರೌಢಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯವು ೧೯೬೦ರಲ್ಲಿ ಪ್ರಕಟಿಸಿತು. ಡಾ.ಎಚ್.ಕೆ.ರಂಗನಾಥ್‌ರವರು ತಮ್ಮ ಇಂಗ್ಲೀಷ್ ಕೃತಿಯನ್ನು ಅನುವಾದಿಸಿ ಕನ್ನಡದಲ್ಲಿ ೧೯೭೮ರಲ್ಲಿ ಪ್ರಕಟಿಸಿದರು. ಇವರ 'ಕರ್ನಾಟಕ ರಂಗಭೂಮಿ' ಎಂಬ ಈ ಪ್ರೌಢ ಪ್ರಬಂಧವು ಕನ್ನಡ ರಂಗಭೂಮಿಯ ಇತಿಹಾಸವನ್ನು ಅಭ್ಯಾಸ ಮಾಡುವವರಿಗೆ ಮಹತ್ವದ ಆಕರ ಗ್ರಂಥ. ಸಾಹಿತ್ಯದಲ್ಲಿ ನಾಟಕದಸ್ಥಾನ, ಕನ್ನಡದ ರಂಗಭೂಮಿಯ ಪ್ರಾಚೀನತೆ, ಜನಪದ ರಂಗಭೂಮಿ, ವೃತ್ತಿ ರಂಗಭೂಮಿ, ವಿಲಾಸಿ ರಂಗಭೂಮಿ, ರಂಗಭೂಮಿಯ ಹಿನ್ನೋಟ – ಮುನ್ನೋಟ, ಎಂಬ ಅಧ್ಯಾಯಗಳ ಮೂಲಕ ರಂಗಭೂಮಿಯ ಸಮಗ್ರ ಮುಖಗಳನ್ನು ವಿಶ್ಲೇಷಿಸಿದ್ದಾರೆ. ಈ ಎಲ್ಲಾ ಕಾರಣಗಳಿಂದ 'ಕರ್ನಾಟಕ ರಂಗಭೂಮಿ' ಕೃತಿಯು ಶ್ರೀ ಎ.ಆರ್.ಕೃಷ್ಣಶಾಸ್ತ್ರಿಗಳ 'ಸಂಸ್ಕೃತ ನಾಟಕ'ದಷ್ಟೇ ಅಮೂಲ್ಯವಾದ ಕೃತಿಯಾಗಿದೆ.

ಡಾ.ಕೆ.ಮರುಳಸಿದ್ದಪ್ಪನವರು ತಮ್ಮ ಪಿ.ಎಚ್.ಡಿ.ಮಹಾಪ್ರಬಂಧವಾದ 'ಆಧುನಿಕ ಕನ್ನಡ ನಾಟಕ'ಗಳ ಅಧ್ಯಯನವನ್ನು ೧೯೭೫ರಲ್ಲಿ ಪ್ರಕಟಿಸಿದರು. ಅಲ್ಲದೆ ಅದರ ಪರಿಷ್ಕೃತ ವಿಸ್ತೃತವಾದ ಪ್ರಥಮ ಆವೃತ್ತಿಯನ್ನು 'ಆಧುನಿಕ ಕನ್ನಡ ನಾಟಕ' ೨೦೦೨ರಲ್ಲಿ ಪ್ರಕಟಿಸಿದರು. ಇದರಲ್ಲಿ ಕನ್ನಡ ರಂಗಭೂಮಿಯ ಪ್ರಾಚೀನತೆ, ಜನಪ್ರಿಯ ರಂಗಭೂಮಿ,

ಕನ್ನಡ ರಂಗಭೂಮಿ, ಹವ್ಯಾಸಿ ರಂಗಭೂಮಿ, ಎಲ್ಲಕ್ಕಿಂತ ಮುಖ್ಯವಾಗಿ ಆಧುನಿಕ ರಂಗಭೂಮಿಯ ಬಗ್ಗೆ ತಲಸ್ಪರ್ಶಿಯಾದ ಅಧ್ಯಯನವಿರುವುದನ್ನು ಕಾಣಬಹುದು.

ಕೆ.ಮರುಳಸಿದ್ದಪ್ಪನವರು ಆಯಾಯ ಕಾಲದ ನಾಟಕ ರಚನೆಯ ಸಾಂಸ್ಕೃತಿಕ, ಸಾಮಾಜಿಕ ಹಿನ್ನೆಲೆಗಳನ್ನು ಗುರುತಿಸಿದ್ದಾರೆ. ನಾಟಕಗಳಬಗ್ಗೆ ಆಧುನಿಕವಿಮರ್ಶೆ ಕ್ರಮಬದ್ಧವಾಗಿ ಇವರಿಂದಲೇ ಪ್ರಾರಂಭವಾಯಿತು ಎನಿಸುತ್ತದೆ. ಪ್ರಹಸನ, ಗೀತನಾಟಕ, ನವ್ಯನಾಟಕ, ಏಕಾಂಕ, ಪ್ರಸಾರ ನಾಟಕ, ಮಕ್ಕಳ ನಾಟಕ ಮತ್ತಿತರ ಪ್ರಕಾರಗಳ ನಾಟಕ ರಚನೆಗಳ ಸ್ವರೂಪ ಲಕ್ಷಣ ಇತ್ಯಾದಿಗಳನ್ನು ಗುರುತಿಸಿ ಈ ಕೃತಿಯಲ್ಲಿ ವಿವೇಚಿಸಲಾಗಿದೆ. ಆಧುನಿಕ ನಾಟಕಗಳ ಬಗ್ಗೆ ಇದೊಂದು ಮೈಲಿಗಲ್ಲಾದ ಕೃತಿ.

ರಂಗಭೂಮಿಯ ಬಗ್ಗೆ ವಿಶೇಷವಾಗಿ ಅಧ್ಯಯನ ಮಾಡಿದ ಕೃತಿಯೆಂದರೆ ಕೆ.ವಿ.ಅಕ್ಷರ ಅವರ 'ರಂಗಪ್ರಪಂಚ' (೧೯೯೯). ಇದು ಜಗತ್ತಿನ ರಂಗಭೂಮಿಗಳ ಪರಿಚಯಾತ್ಮಕ ಅಧ್ಯಯನವಾಗಿದೆ. ಈ ಗ್ರಂಥದಲ್ಲಿ ಗ್ರೀಕ್ ರಂಗಭೂಮಿ, ರೋಮನ್ ರಂಗಭೂಮಿ, ಎಲಿಜಬತ್‌ನ ರಂಗಭೂಮಿ, ಭಾರತದ ಶಾಸ್ತ್ರೀಯ ರಂಗ ಸಂಪ್ರದಾಯಗಳು, ವಾಸ್ತವವಾದಿ ನಾಟಕರಚನೆ, ಕಂಪನಿ ನಾಟಕಗಳು ಇತ್ಯಾದಿಗಳ ಬಗ್ಗೆ ಜಗತ್ತಿನ ರಂಗಸಂಪ್ರದಾಯದ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ. ಇದು ಆಧುನಿಕ ನಾಟಕಗಳ ಪ್ರಾಯೋಗಿಕ ಮಹತ್ವ ಹಾಗೂ ಜಗತ್ತಿನ ಇತಿಹಾಸ ಪರಂಪರೆಯನ್ನು ಪರಿಚಯ ಮಾಡಿಕೊಡುವ ಪ್ರಥಮ ಮಾಹಿತಿ ಗ್ರಂಥವಾಗಿದೆ. ಎನ್.ಎಸ್.ವೆಂಕಟರಾಮ್‌ರವರ 'ರಂಗಭೂಮಿ (೨೦೦೧)', 'ನವಕರ್ನಾಟಕ ಕೈಪಿಡಿ–ರಂಗಭೂಮಿ' (೨೦೦೧) ಇವುಗಳು ರಂಗಕರ್ಮಿಗಳ ಮಾರ್ಗದರ್ಶನ ಕೈಪಿಡಿಗಳಾಗಿ ಗಮನಸೆಳೆದಿವೆ.

ಎನ್.ಎಸ್. ವೆಂಕಟರಾಮ್‌ರವರು ಪ್ರಾಯೋಗಿಕ ಮಾರ್ಗದರ್ಶಿಯಲ್ಲಿ ಹತ್ತಾರು ವಿಷಯಗಳನ್ನು ಪ್ರತಿಪಾದಿಸಿದ್ದಾರೆ. ಅವುಗಳೆಲ್ಲದರ ಬಗ್ಗೆ ಕೂಲಂಕಷವಾಗಿ ಲೇಖಕರು ಚರ್ಚಿಸಿದ್ದಾರೆ. ಪಾಶ್ಚಾತ್ಯ, ಭಾರತೀಯ, ಕನ್ನಡ ರಂಗಭೂಮಿ ಇತಿಹಾಸಗಳನ್ನು ವಿವರಿಸಿದ ಮೇಲೆ ಪ್ರಯೋಗ ಪದ್ಧತಿಗಳನ್ನು ಚರ್ಚಿಸಿದ್ದಾರೆ. ಪಾಶ್ಚಾತ್ಯ ರಂಗಪದ್ಧತಿಗಳು, ಸಾಂಪ್ರದಾಯಿಕ, ಏಕಕಾಲಿಕ ರಂಗಪದ್ಧತಿಗಳನ್ನು ವಿಷದಪಡಿಸಿದ್ದಾರೆ. ಇತಿಹಾಸ ಮತ್ತು ಪ್ರಯೋಗ ಎರಡನ್ನೂ ಒಟ್ಟಿಗೆ ವಿವೇಚಿಸಿ ವಿವರಿಸಿಬರೆದಿರುವ ಕನ್ನಡದ ಮೊಟ್ಟ ಮೊದಲನೆಯ ಕೃತಿ ಇದು. ಲೇಖಕರು ತಮ್ಮ ಅನುಭವಗಳ ಬುನಾದಿಯ ಮೂಲಕ ರಂಗಭೂಮಿಯ ಒಳನೋಟ – ಪ್ರಯೋಗಗಳನ್ನು ಮುನ್ನೋಟದಲ್ಲಿ ನಾಟಕ ಕೃತಿ–ರಂಗ ಸಂಯೋಜನೆ ರಂಗ ಚಿತ್ರಣ, ಕೊನೆಗೆ ರಂಗಕೃತಿನಿರ್ಮಾಣದ ಬಗ್ಗೆ ಬಹು ಎಚ್ಚರದಿಂದ ವಿಷಯಗಳನ್ನು ವಿಷಧೀಕರಿಸಿದ್ದಾರೆ.

ಉಳಿದಂತೆ ರಂಗಭೂಮಿಗೆ ಸಂಬಂಧಿಸಿದಂತೆ ಗಿರಡ್ಡಿ ಗೋವಿಂದರಾಜ ಅವರ 'ನಾಟಕ ಸಾಹಿತ್ಯ ಮತ್ತು ರಂಗಭೂಮಿ' (೧೯೮೯), ಎ.ಆರ್.ನಾಗಭೂಷಣ ಅವರ 'ನಾಟಕ ರಚನೆ' (೧೯೮೭), ಕೀರ್ತಿನಾಥ ಕುರ್ತುಕೋಟಿ ಅವರ 'ವಿಮರ್ಶೆಯ ವಿನಯ ನಾಟಕ' (೧೯೮೫) ಹೆಚ್.ಎಸ್.ಶಿವಪ್ರಕಾಶರ 'ಸಾಹಿತ್ಯ ರಂಗಭೂಮಿ'(೧೯೯೩), ಕೆ.ವಿ.ಅಕ್ಷರ ಅವರ 'ಎಪಿಕ್ ರಂಗಭೂಮಿ'(೧೯೯೯), ಗಣೇಶ ಅಮೀನಗಡ ಅವರ 'ಪ್ರಯೋಗ ಪ್ರಸಂಗ'(೨೦೦೪), ಡಾ.ಕಾ.ವೆಂ.ಶ್ರೀನಿವಾಸಮೂರ್ತಿ ಅವರ 'ಕನ್ನಡ ರಂಗಭೂಮಿ' (೨೦೦೫) ಮುಂತಾದ ಕೃತಿಗಳು ರಂಗಭೂಮಿಯ ಮೇಲೆ ಗಮನಾರ್ಹವಾದ ಅಧ್ಯಯನಗಳಾಗಿವೆ.

ಅಂತೆಯೇ ಪಾಶ್ಚಾತ್ಯ ದೇಶಗಳಲ್ಲಿ ನಡೆದಿರುವ ರಂಗಭೂಮಿ ಸಂಶೋಧನೆಯನ್ನು ಗಮನಿಸಿದಾಗ ಕನ್ನಡ ರಂಗಭೂಮಿಯ ನಟ ನಟಿಯರ ಅಭಿನಯದ 'ಥಿಯರಿ'ಗಳು ಹುಟ್ಟಿ ಬಂದಿಲ್ಲ. ಈ ಬಗ್ಗೆ ಸಂಶೋಧನೆಯ ಬಾಗಿಲನ್ನು ತೆರೆಯಬೇಕಾಗಿದೆ.

# ಅಧ್ಯಾಯ-೩

## ಬಸವಣ್ಣನ ಜೀವನ ಒಂದು ನೋಟ

೧. ಜನನ ಮತ್ತು ಬಾಲ್ಯ

೨. ಬಾಗೇವಾಡಿಯಿಂದ ಕೂಡಲಸಂಗಮಕ್ಕೆ

೩. ಸಮಗ್ರ ಕ್ರಾಂತಿಯ ಹಾದಿಯಲ್ಲಿ

೪. ಅನುಭವ ಮಂಟಪದ ಸ್ಥಾಪನೆ

೫. ಕಲ್ಯಾಣ ಕ್ರಾಂತಿ

೬. ಬಸವಣ್ಣನವರ ಐಕ್ಯ

# ಅಧ್ಯಾಯ – ೩

## ಬಸವಣ್ಣನವರ ಜೀವನ – ಒಂದು ನೋಟ

"ಜಗತ್ತು ಸೃಷ್ಟಿಸಿದ ಶ್ರೇಷ್ಠತಮಮಹಾಪುರುಷರು ಬಸವೇಶ್ವರರು" ಎಂದು ನುಡಿದವರು ಬಾಬಾ ಸಾಹೇಬ್ ಅಂಬೇಡ್ಕರರು. ಬಸವೇಶ್ವರರು ಸಾರಿದ ಸಂದೇಶವನ್ನು ಕಾರ್ಯಗತಗೊಳಿಸಿದ್ದರೆ,ಇಂದು ಈ ದೇಶದಲ್ಲಿ ತಾಂಡವವಾಡುತ್ತಿರುವ ಸಾಮಾಜಿಕ ಅನಿಷ್ಟಗಳು, ಸಂಭವಿಸುತ್ತಿರುವ ಅನಾಹುತಗಳು ಅಳಿಸಿ ಹೋಗುತ್ತಿದ್ದವು ಎಂದು ಸಾರಿದವರು ಮಹಾಕವಿ ಕುವೆಂಪು ಅವರು"[೧] ಹೌದು ಬಸವಣ್ಣನೆಂದರೆ ಕೇವಲ ವ್ಯಕ್ತಿಯಲ್ಲ, ಆತನೊಬ್ಬ ಮಹಾನ್ ಶಕ್ತಿ, ಬಸವಣ್ಣನ ಜೀವನದ ಹಾಸು ಬಹಳ ವಿಸ್ತಾರವಾದದ್ದು. ಸಾಮಾಜಿಕ, ರಾಜಕೀಯ, ಸಾಹಿತ್ಯಕ ಧಾರ್ಮಿಕ–ಹೀಗೆ ಎಲ್ಲಾ ರಂಗಗಳಲ್ಲಿಯೂ ಬೆಳಗಿದ ಅಪ್ರತಿಮ ವ್ಯಕ್ತಿತ್ವ ಆ ಮಹಾನುಭಾವನದು. ಲೌಕಿಕ ಹಾಗೂ ಅಲೌಕಿಕಗಳಿಗೆ ಸೇತುವೆ ನಿರ್ಮಿಸಿದ ಭಕ್ತಿ ಭಂಡಾರಿ ಬಸವೇಶ್ವರರು 'ಜಗದ ಜ್ಯೋತಿ' ಎನಿಸಿದ್ದಾರೆ.

ಬಸವಣ್ಣ ಕರ್ನಾಟಕದ ಚರಿತ್ರೆಯಲ್ಲಿ ವಿಭಿನ್ನವ್ಯಕ್ತಿತ್ವದ ಶಕ್ತಿ. ಬಹುಶಃ ಈತನ ಹುಟ್ಟು ಹಲವು ವಿಧದ ಚರ್ಚೆ, ವಿವಾದಗಳಿಗೆ ಹೇಗೆ ಗ್ರಾಸವಾಗಿದೆಯೋ ಹಾಗೆಯೇ ಅಂತ್ಯದ ಬಗೆಗೂ ಕೂಡ ಅಷ್ಟೇ ಚರ್ಚೆ ಇಂದಿಗೂ ಕೂಡ ನಡೆಯುತ್ತಿದೆ.

ಹರಿಹರನ 'ಬಸವರಾಜದೇವರ ರಗಳೆ', ಪಾಲ್ಕುರಿಕೆ ಸೋಮನಾಥನ 'ತೆಲುಗು ಬಸವಪುರಾಣ'(ಕನ್ನಡಕ್ಕೆ ಡಾ.ಪಿ.ವಿ.ನಾರಾಯಣ) ಭೀಮಕವಿಯ 'ಬಸವಪುರಾಣ', ಕಂಚೀಶಂಕರಾರಾಧ್ಯರ 'ಬಸವೇಶ ವಿಜಯ', ಶ್ರೀ ಸಿದ್ಧನಂಜೇಶನ 'ಶ್ರೀ ಗುರುರಾಜ ಚಾರಿತ್ರ', ಷಡಕ್ಷರ ದೇವನ 'ಬಸವರಾಜ ವಿಜಯ', ಗುರುಚನ್ನಬಸವರಾಜಶಿಷ್ಯನ 'ಬಸವಪುರಾಣ', ನಿಡಗಲ್ಲು ಚನ್ನಪ್ಪನ–ಶರಣಲೀಲಾಮೃತ, ಲಕ್ಕಣ್ಣದಂಡೇಶನ 'ಶಿವತತ್ತ್ವಚಿಂತಾಮಣಿ', ಸಿಂಗಿರಾಜ ಕವಿಯ–'ಬಸವರಾಜಚರಿತ್ರ', ಗರಣಿ ಬಸವಲಿಂಗನ 'ಬಸವೇಶ್ವರ ಕಾವ್ಯಗಳು' ಮುಂತಾದ ಗ್ರಂಥಗಳು ಬಸವಣ್ಣನ ಜನನ ವೃತ್ತಾಂತಕ್ಕೆ ಕೈಲಾಸದ ಸ್ಪರ್ಶವಿರಿಸಿವೆ. ಆದರೆ ಇವು ಬಸವಣ್ಣನ ಮಾನವೀಯ ಹೋರಾಟದ ಅರ್ಥವಂತಿಕೆಗೆ ವ್ಯತ್ಯಯವನ್ನುಂಟು ಮಾಡುತ್ತವೆ. ಈ ಹಿನ್ನೆಲೆಯಲ್ಲಿ ಬಸವಣ್ಣನ ಜೀವನ ಚರಿತ್ರೆಯನ್ನು ಕುರಿತು ದೃಷ್ಟಿಬೀರುವುದು ಅಗತ್ಯ.

ಬಸವೇಶ್ವರರು ಬಿಜಾಪುರಜಿಲ್ಲೆಯ ಬಾಗೇವಾಡಿಯ (ತರ್ದವಾಡಿ) ಮಾದರಸ ಹಾಗೂ ಮಾದಲಾಂಬಿಕೆ ಎಂಬ ಕಮ್ಮೆಬ್ರಾಹ್ಮಣಕುಲದ ದಂಪತಿಗಳಿಗೆ ಜನಿಸಿದರು. 'ಶಿವತತ್ವ ಚಿಂತಾಮಣಿ' ಮತ್ತು 'ಕಾಲಜ್ಞಾನದ ವಚನಗಳು' ನೀಡುವ ಮಾಹಿತಿಗಳಿಂದ ವಿದ್ವಾಂಸರು ಬಸವಣ್ಣನ ಜನನದ ಕಾಲವನ್ನು ಕಿ.ಶ.೧೧೩೧ ಎಂದು ಅಭಿಪ್ರಾಯಪಟ್ಟಿದ್ದಾರೆ.

---

೧. ಡಾ. ದೇ ಜವರೇಗೌಡ – ಎನ್ನ ತಂದೆ ಕೂಡಲ ಸಂಗಮದೇವಾ.... ಬಸವಪಥ ಜುಲೈ ೨೦೦೭ರ ಲೇಖನಗಳ ಸಂಗ್ರಹ – ಕುಲದ ಹೊರಗೆ – ಪುಟ–೪

ಅರ್ಜುನವಾಡ ಶಾಸನದಲ್ಲಿ ಬರುವ "*ಮತ್ತಂ ತರ್ದವಾಡಿಮಧ್ಯ ಗ್ರಾಮ ಭಾಗವಾಡಿಪುರವರಾಧೀಶ್ವರ ಮಾಧಿರಾಜನ ತನೂಜಂ ಬಸವರಾಜನ ಮಹಿಮೆಯೆಂತೆಂದಡೆ*" ಎಂಬ ಸಾಲುಗಳು ಇದಕ್ಕೆ ಪುಷ್ಟಿನೀಡುತ್ತದೆ.

ಬಸವಣ್ಣನವರ ಪರ್ಯಾಯ ನಾಮಗಳನ್ನು ಪ್ರಸ್ತಾಪಿಸುವ ೧೧ ಶಾಸನಗಳು ಸಂಶೋಧಕರಿಂದ ಮಾನ್ಯತೆ ಪಡೆದು ಸರ್ವಸಮ್ಮತವಾಗಿವೆ. ಅವುಗಳೆಂದರೆ:

ಕ್ರಿ.ಶ.೧೨೪೫ರ ಹಿರಿಯೂರ ಶಾಸನ–'ಬಸವಯ್ಯ'
ಕ್ರಿ.ಶ.೧೨೬೧ರ ಅರ್ಜುನವಾಡ ಶಾಸನ–'ಬಸವರಾಜ', 'ಸಂಗನ ಬಸವ'
ಕ್ರಿ.ಶ.೧೨೬೨ರ ಚೌಡದಾನಪುರಾಣದ ೨ ಶಾಸನಗಳು 'ಬಸವಯ್ಯ' 'ಸಂಗಮೇಶನಪುತ್ರ'
ಕ್ರಿ.ಶ.೧೨೭೫ರ ಕಲ್ಲೀದೇವರಪುರದ ಶಾಸನದಲ್ಲಿಯ 'ಬಸವರಾಜ' 'ಸಂಗಬಸವಯ್ಯ'
ಕ್ರಿ.ಶ.೧೨೮೦ರ ಮರಡಿಪುರದ ಶಾಸನ–'ಸಂಗನ ಬಸವಯ್ಯ'
ಕ್ರಿ.ಶ.೧೪ನೇ ಶತಮಾನದ ಗುಡಿಹಾಳ ಶಾಸನದಲ್ಲಿಯ 'ಬಸವರಾಜದೇವರು'
ಕ್ರಿ.ಶ.೧೬೬೦ರ ಆನಂದಪುರ ಮಠದ ತಾಮ್ರಶಾಸನದಲ್ಲಿಯ 'ಬಸವೇಶ್ವರ'
ಕ್ರಿ.ಶ.೧೬೮೬ರ ಜೋಡಿದಾಸೇನ ಹಳ್ಳಿಯ ಶಾಸನದಲ್ಲಿಯ 'ಬಸವರಾಜೇಂದ್ರ'
ಕ್ರಿ.ಶ.೧೭೦೦ರ ಕಾನಕಾನಹಳ್ಳಿಯ ಎರಡು ತಾಮ್ರಶಾಸನಗಳಲ್ಲಿಯ 'ಬಸವೇಶ್ವರ ಸ್ವಾಮುಲು'.

– ಈ ಮೇಲ್ಕಂಡ ಶಾಸನಗಳಲ್ಲಿ ಉಲ್ಲೇಖಿತ ವ್ಯಕ್ತಿಯ ಹೆಸರುಗಳು ಬಸವಣ್ಣನವರ ಪರ್ಯಾಯ ನಾಮಗಳಾಗಿದ್ದು ಬಸವಣ್ಣನವರಿಗೆ ಸಂಬಂಧಿಸಿದವುಗಳಾಗಿವೆ. ಈ ಶಾಸನಗಳ ಆಧಾರದ ಮೇಲೆ ಫ.ಗು.ಹಳಕಟ್ಟಿ, ಎಸ್.ಶ್ರೀಕಂಠಶಾಸ್ತ್ರಿ, ಎನ್.ಲಕ್ಷ್ಮೀನಾರಾಯಣರಾಯ, ಕಪಟರಾಳ ಕೃಷ್ಣರಾಯ, ಟಿ.ಎನ್.ಮಲ್ಲಪ್ಪ, ಚನ್ನಮಲ್ಲಿಕಾರ್ಜುನ, ಮತ್ತು ಪಿ.ಬಿ.ದೇಸಾಯಿಯವರು ಬಸವಣ್ಣನವರ ಜೀವನ, ತಂದೆ, ತಾಯಿ, ಜಾತಿ ಮತ್ತು ವಂಶಾವಳಿಯ ಬಗೆಗೆ ಸಂಶೋಧನೆಮಾಡಿದ್ದಾರೆ.

"ಬಸವಣ್ಣನ ತಂದೆ ವೈಧಿಕ ಧರ್ಮನಿಷ್ಠೆಯ ಆಚಾರ್ಯ, ಮನೆಯಲ್ಲಿ ಸುಸಂಸ್ಕೃತವಾತಾವರಣ, ಸುತ್ತಮುತ್ತ ಸುವಿಖ್ಯಾತವಿದ್ವಾಂಸರು, ಎತ್ತತಿರುಗಿದರತ್ತವೇದೋಕ್ತ ಆಚರಣೆಗಳು,ಯಜ್ಞಯಾಗಾದಿಗಳು ಕಾಣುತ್ತಿದ್ದವು; ಸದಾ ವೇದಪಠಣ ಕೇಳಿಸುತ್ತಿತ್ತು. ಬಾಲಕನಿಗೆ ಅನೇಕ ಶ್ಲೋಕಗಳು ಕಂಠಸ್ಥವಾದವು. ತಮ್ಮ ಮನೆಯಲ್ಲಿ ನಡೆಯುತ್ತಿದ್ದ ವಿದ್ವತ್ ಚರ್ಚೆಗಳು, ಅಗ್ರಹಾರದಲ್ಲಿ ಏರ್ಪಾಡಾಗುತ್ತಿದ್ದ ಪುರಾಣಪ್ರವಚನಗಳು, ಶಿವಕಥಾ ಪ್ರಸಂಗಗಳು ಬಸವನ ಮೇಲೆ ಗಾಢ ಪರಿಣಾಮ ಬೀರುತ್ತಿದ್ದವು. ತಂದೆಯ ಗಾಂಭೀರ್ಯ, ವಿದ್ವತ್ತು, ವಿಚಕ್ಷಣತೆಗಳು, ತಾಯಿಯ ಪೂಜಾನಿಷ್ಠೆ, ಸರ್ವಭೂತಾನುಕಂಪ, ವಾತ್ಸಲ್ಯಭಾವ ಮೊದಲಾದವು ಬಾಲಕನ ವ್ಯಕ್ತಿತ್ವದ ಮೇಲೆ ಅಚ್ಚೊತ್ತಿದ್ದವು"[೨]. ಇವೆಲ್ಲದರ ಪರಿಣಾಮವಾಗಿ ಬಾಲಕ ಬಸವನು ಪ್ರಶ್ನಿಸುವ ಮನೋಭಾವವನ್ನು ಬೆಳೆಸಿಕೊಂಡ. ಪ್ರಕೃತಿಯ ರಹಸ್ಯ,

---

೨. ವಿಶ್ವಜ್ಯೋತಿ ಬಸವಣ್ಣನವರು–ಪ್ರೊ.ಬಿ.ವಿರೂಪಾಕ್ಷಪ್ಪ, ಪ್ರೊ.ಎಸ್.ವಿದ್ಯಾಶಂಕರ, ಶ್ರೀ.ಟಿ.ಆರ್.ಮಹಾದೇವಯ್ಯ. ಪುಟ–೦೮

ಸ್ಪೃಶ್ಯ-ಅಸ್ಪೃಶ್ಯ, ಲಿಂಗತಾರತಮ್ಯ, ವೈದಿಕ ಧರ್ಮದಲ್ಲಿದ್ದ ಕೆಲವು ಅನಿಷ್ಟ ಆಚರಣೆಗಳನ್ನು ಕುರಿತು ಪ್ರಶ್ನಿಸುತ್ತಿದ್ದನು. "ಅವನ ವಿಚಿಕಿತ್ಸಕ ದೃಷ್ಟಿ, ಆಲೋಚನಾ ಲಹರಿಗಳು ಪ್ರಬುದ್ಧವಾಗಿದ್ದು ಅವನ ವಯಸ್ಸಿಗೆ ಮೀರಿದವಾಗಿದ್ದವು. ಆತ ಒಳ್ಳೆಯದನ್ನು ಕಂಡರೆ ಸಂತೋಷದಿಂದ ಸೂಚಿಸುತ್ತಿದ್ದಂತೆ, ಸರಿಯಲ್ಲದ್ದನ್ನು, ಅನ್ಯಾಯವನ್ನು ಕಂಡಾಗ ಉಗ್ರವಾಗಿ ಪ್ರತಿಭಟಿಸುತ್ತಿದ್ದನು. ಆತನ ಸೋಪಜ್ಞತೆ ಆಶ್ಚರ್ಯತರುವಂತಿತ್ತು".[೩]

ಒಮ್ಮೆ ಬಸವಣ್ಣನಿಗೆ ಕೃಷ್ಣಾ ಮತ್ತು ಮಲಾಪಹಾರೀ ನದಿಗಳ ಸಂಗಮದಲ್ಲಿದ್ದ ಕೂಡಲ ಸಂಗಮ ಕ್ಷೇತ್ರಕ್ಕೆ ತೆರಳಿ ಸಂಗಮನಾಥನ ದರ್ಶನ ಮಾಡುವ ಭಾಗ್ಯ ದೊರೆಯಿತು. ಅಲ್ಲಿಯೇ ಬಸವಣ್ಣನಿಗೆ ಗುರು 'ಜಾತವೇದ ಮುನಿ'ಗಳ ಆಶೀರ್ವಾದ ದೊರೆತು ಮುಂದೆ ಅವರ ಶಿಷ್ಯರಾದದ್ದನ್ನು ಕಾಣಬಹುದು.

ಬಸವಣ್ಣನಿಗೆ ಎಂಟುವರ್ಷ ತುಂಬಿದಾಗ ಬ್ರಾಹ್ಮಣ ಸಂಪ್ರದಾಯದಂತೆ ಉಪನಯನ ಸಂಸ್ಕಾರಕ್ಕೆ ಸಿದ್ಧತೆ ನಡೆಯಿತು. ಇದನ್ನು ದೊಡ್ಡ ಬಂಧನ ಎಂದು ಭಾವಿಸಿದ ಆತ 'ಮೇಲು-ಕೀಳು'ಗಳಿಗೆ ಕಾರಣವಾದ ವರ್ಣಾಶ್ರಮ ಧರ್ಮವನ್ನು ತಿರಸ್ಕರಿಸಿ ಸ್ತ್ರೀಯರು ಮತ್ತು ದಲಿತರೂ ಸೇರಿದಂತೆ ಎಲ್ಲರನ್ನೂ ತಾರತಮ್ಯವಿಲ್ಲದೆ ಸಮಾನವಾಗಿ ಕಾಣುವ ಧರ್ಮವೊಂದನ್ನು ಗುರುತಿಸಲು ಬಯಸಿದನು. ಇಷ್ಟಾದರೂ ಒತ್ತಾಯಪೂರ್ವಕವಾಗಿ ಉಪನಯನಕ್ರಿಯೆ ಯಾಂತ್ರಿಕವಾಗಿ ಮುಗಿಯಿತು. ವೈದಿಕಾಚಾರದ ಬಂಧದಿಂದಲೇ ಅವನ ಶಿಕ್ಷಣ ಸಾಗಿತು. ಯಾವುದನ್ನು ವಿರೋದಿಸುತ್ತಿದ್ದನೋ ಅದನ್ನೇ ಕಲಿಯ ಬೇಕಾದ ಪರಿಸ್ಥಿತಿ ಒದಗಿತು.ಇದನ್ನು ಪ್ರತಿಭಟಿಸಿದ ಬಸವಣ್ಣನು ಈ ಹಿಂದೆ ತನಗೆ ಆಹ್ವಾನ ನೀಡಿದ್ದ ಕೂಡಲ ಸಂಗಮದ ಶ್ರೀಗುರು ಜಾತವೇದ ಮುನಿಗಳ ಪಾದದಡಿಗೆ ಬಂದು ಶರಣು ಎಂದು ಆನಂದ ಬಾಷ್ಪ ಸುರಿಸಿದನು.

**ಬಾಗೇವಾಡಿಯಿಂದ ಕೂಡಲಸಂಗಮಕ್ಕೆ:**

ಬಸವಣ್ಣ ಬೆಳೆದದ್ದು ಬಾಗೇವಾಡಿಯಲ್ಲಿ. ಅಲ್ಲಿನ ಇಂಗಳೇಶ್ವರ ದೇವಾಲಯದ ವಾತಾವರಣ, ಅಗ್ರಹಾರದ ೫೦೦ ಮಹಾಜನರ ಸಮಾಜ ಅಧಿಪತಿಯಾಗಿದ್ದ ತನ್ನ ತಂದೆಯು ಯಜನ (ಯಜ್ಞವನ್ನು ಮಾಡುವುದು), ಯಾಜನ(ಯಜ್ಞವನ್ನು ಮಾಡಿಸುವುದು), ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ (ಧನ ತೆಗೆದು ಕೊಳ್ಳುವುದು) ಈ ಷಟ್‌ಕರ್ಮಗಳಲ್ಲಿ ಸದಾ ಮಗ್ನರಾಗಿರುತ್ತಿದ್ದುದು ಬಸವಣ್ಣನಿಗೆ ಉಸಿರುಗಟ್ಟುವ ವಾತಾವರಣವನ್ನುಂಟು ಮಾಡಿತ್ತು. ಮುತ್ತಜ್ಜಿಯನ್ನು ಕಾಣುವ ನೆಪದಲ್ಲಿ ಬಾಗೇವಾಡಿಯನ್ನು ತೊರೆದು ಬಸವಣ್ಣನು ಶೈವಧರ್ಮದ ತವರು ನೆಲೆಯಾದ ಕೃಷ್ಣ ಮಲಪ್ರಭಾ ನದಿ ಸಂಗಮದ ಕೂಡಲ ಸಂಗಮದಲ್ಲಿ ನೆಲೆ ನಿಲ್ಲುತ್ತಾನೆ. ಆ ಕಾಲದಲ್ಲಿ ಕೂಡಲ ಸಂಗಮವು ಉನ್ನತಾಧ್ಯಯನದ

---

೩. ವಿಶ್ವಜ್ಯೋತಿ ಬಸವಣ್ಣನವರು-ಪ್ರೊ.ಬಿ.ವಿರೂಪಾಕ್ಷಪ್ಪ, ಪ್ರೊ.ಎಸ್.ವಿದ್ಯಾಶಂಕರ, ಶ್ರೀ.ಟಿ.ಆರ್.ಮಹಾದೇವಯ್ಯ

ಘಟಿಕಾ ಸ್ಥಾನವಾಗಿದ್ದರಿಂದ ದೇಶದ ನಾನಾಭಾಗಗಳಿಂದ ಅಲ್ಲಿಗೆ ಹೆಚ್ಚಿನ ಶಿಕ್ಷಣ ಪಡೆಯಲು ವಿದ್ಯಾರ್ಥಿಗಳು ಬರುತ್ತಿದ್ದರು. ಇವರ ಸ್ನೇಹದೊಂದಿಗೆ ಈಶಾನ್ಯ ಗುರುಗಳ ಮಾರ್ಗದರ್ಶನ ದೊರೆತು ಬಸವಣ್ಣನು ಮತ್ತಷ್ಟು ಸತ್ತ್ವಯುತ ಯೋಚನಾಲಹರಿಗಳನ್ನು ರೂಪಿಸಿಕೊಂಡನು. "ಸಂಗಮದ ಪ್ರಾಕೃತಿಕ ಸೌಂದರ್ಯವು ಆಧ್ಯಾತ್ಮ ಸಾಧನೆಗೆ ಹೇಳಿಮಾಡಿಸಿದಂತಿದೆ. ಸಂಗಮದ ದೇವರೇ ಪ್ರಕೃತಿ, ಪ್ರಕೃತಿಯೇ ದೇವರು ಮಂಗಳಶಿವಮಯ ಸ್ಥಾನ ಬಸವಣ್ಣನಿಗೆ ನಿರಾಳವಾಗಿ ಉಸಿರಾಡಲು, ಯೋಚಿಸಲು, ಕಾರ್ಯೋನ್ಮುಖವಾಗಲು ಉತ್ತೇಜಿಸಿತು. ಇಲ್ಲಿ ಸರ್ವಾಂತರ್ಯಾಮಿಯೂ, ನಿರಾಕಾರನೂ, ಪರಂಜ್ಯೋತಿಸ್ವರೂಪನೂ ಆದ ಪರಮಾತ್ಮನನ್ನು ಸಂಗಮೇಶ್ವರನ ರೂಪದಲ್ಲಿ ಕಾಣಲು, ಅನುಭವಿಸಲು, ಆನಂದಿಸಲು ಸಾಧ್ಯವಾಗುತ್ತದೆ. ಬಸವಣ್ಣನ ಆಧ್ಯಾತ್ಮಿಕ ಪ್ರಗತಿಗೆ ಸಂಗಮನಾಥನು ಮಾರ್ಗದರ್ಶಿ, ಚೈತನ್ಯ ಶಕ್ತಿಯಷ್ಟೇ ಅಲ್ಲದೆ, ಸಾಹಿತ್ಯಾಭಿವ್ಯಕ್ತಿಗೆ ನಿರಂತರ ಸ್ಫುರಣಶಕ್ತಿಯೂ ಆಗಿರುವನು."[೪] ಎನ್ನುವ ಮಾತು ಅರ್ಥಪೂರ್ಣವಾದುದು.

ಸಂಗಮನಾಥ ದೇವಾಲಯದ ಸಾನ್ನಿಧ್ಯದಲ್ಲಿ, ಈಶಾನ್ಯ ಗುರುಗಳ ಮಾರ್ಗದರ್ಶನದಲ್ಲಿ ಬಸವಣ್ಣನು ಅನುಭವಗಳ ಪಾಠಶಾಲೆಯಲ್ಲಿ ಜೀವನಾನುಭವಗಳೆಂಬ ಪಠ್ಯದ ಸಮಸ್ಯೆಗಳನ್ನು ಬಿಡಿಸುವ ಶ್ರುತಿ, ಸ್ಮೃತಿ, ಪುರಾಣ, ಶಿವಾಗಮಗಳು, ಜೈನ, ಬೌದ್ಧ, ಚಾರ್ವಾಕ ಧರ್ಮಗ್ರಂಥಗಳನ್ನು ಆಳವಾಗಿ ಅಭ್ಯಸಿಸುವ ಮೂಲಕ, ಸಕಲ ಮತಗಳ ಸತ್ಯವನ್ನು ಕಾಣುವ, ಅದನ್ನು ಶ್ರೀಸಾಮಾನ್ಯರಿಗೆ ಪ್ರಚಾರಪಡಿಸಬೇಕೆಂಬ ಬಯಕೆ ಚಿಗುರೊಡೆಯ ತೊಡಗುತ್ತದೆ. ಸ್ವತಃ ಬ್ರಾಹ್ಮಣನಾದರೂ ವರ್ಣಾಶ್ರಮರಹಿತಸಮಾಜದ ಕನಸು ಕಾಣತೊಡಗುತ್ತಾನೆ. ವಿಗ್ರಹಾರಾಧನೆ, ಬಹುದೇವೋಪಾಸನೆ, ಢಾಂಬಿಕ ಭಕ್ತಿ, ಮಾಟ, ಮಂತ್ರಗಳ ಕುರಿತಾಗಿ ವಿದ್ವಾಂಸರೊಡನೆ ಸಂವಾದ ನಡೆಸುವ ಅವಕಾಶ ಕೂಡಲ ಸಂಗಮದಲ್ಲಿ ದೊರೆತು ಬಸವಣ್ಣನು ಮತ್ತಷ್ಟು ಪಕ್ವವಾಗುತ್ತಾನೆ.

ಸಾಹಿತ್ಯ ಜ್ಞಾನರತ್ನ ಕೃತಿಗಳೆಲ್ಲವೂ ಸಂಸ್ಕೃತದಲ್ಲಿ ಅಡಗಿದ್ದು ಅದು ಈ ಜನ ಸಾಮ್ಯಾನರನ್ನು ತಲುಪಲು ಸಾಧ್ಯವಾಗುತ್ತಿಲ್ಲ. "ಬುದ್ಧನು ಆಗಿನ ಜನ ಭಾಷೆಯಾದ ಪಾಲಿಯಲ್ಲಿ ತನ್ನ ವಿಚಾರ ಸರಣಿಯನ್ನು ಹರಿಯಬಿಡಲಿಲ್ಲವೆ? ಮುದನೂರಿನ ಜೇಡರ ದಾಸಿಮಯ್ಯ ಶರಣರು ಆಡುಮಾತಿನಲ್ಲಿ ತನ್ನ ಅನುಭವ-ಅನುಭಾವಗಳನ್ನು ವ್ಯಕ್ತಗೊಳಿಸಲು 'ವಚನ'ವೆನ್ನುವ ಸಾಹಿತ್ಯ ಮಾಧ್ಯಮವನ್ನು ಬಳಸಿಕೊಂಡಂತೆ ತಾನೂ ಮಾಡಿದರೆ ಹೇಗೆ? ಎಂದು ಕೂಡಲ ಸಂಗಮನನ್ನು ಸಾಕ್ಷಿಯಾಗಿಟ್ಟು ನನ್ನ ಅಂತರಂಗದ ವೇದನೆ ನಿವೇದನೆಗಳನ್ನು ಆಡು ಮಾತಿನಲ್ಲಿ ಎರಕಗೊಳಿಸಿದರೆ ಹೇಗೆ? ಎಂದು ಅನುಮಾನದ ಮಾಲಿನ್ಯವನ್ನು ತೊಳೆಯ ಬೇಕಾದರೆ ಈ ಮಾಧ್ಯಮವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಬಹುದಲ್ಲವೆ?"[೫] ಎಂದು ಆಲೋಚಿಸಿದನು. ಅಂದಿನಿಂದ ತನ್ನ ಅನುಭವ-ಅನುಭಾವಗಳಿಗೆ ಮಾತಿನ ರೂಪಕೊಟ್ಟನು. ಈ ಮೂಲಕ ವಚನ ಸಾಹಿತ್ಯಭಂಢಾರವು ಸಮೃದ್ಧವಾಯಿತು. ಜನಸಾಮಾನ್ಯರ ತಿಮಿರಾಂಧಕಾರವು ಕಳೆಯ ತೊಡಗಿತು. ಬಸವಣ್ಣನ

---

೪. ಪ್ರೊ.ಬಿ.ಪಿರೂಪಾಕ್ಷಪ್ಪ. ಪ್ರೊ.ಎಸ್.ವಿದ್ಯಾಶಂಕರ, ಶ್ರೀ.ಟಿ.ಆರ್.ಮಹಾದೇವಯ್ಯ-ವಿಶ್ವಜ್ಯೋತಿ ಬಸವಣ್ಣನವರು ಪು-೩೨

೫. ಪ್ರೊ.ಬಿ.ವಿರೂಪಾಕ್ಷಪ್ಪ. ಪ್ರೊ.ಎಸ್.ವಿದ್ಯಾಶಂಕರ, ಶ್ರೀ.ಟಿ.ಆರ್.ಮಹಾದೇವಯ್ಯ-ವಿಶ್ವಜ್ಯೋತಿ ಬಸವಣ್ಣನವರು ಪು-೪೩

ಸರ್ವವಿದ್ಯೆಗಳ ತಲಸ್ಪರ್ಶಿ ಅರಿವು ಮಂಗಳವೇಡೆಗೆ ಅತ್ಯಗತ್ಯ ಎಂದು ಗುರು ಈಶಾನ್ಯ ಮುನಿಗಳು ಹೇಳಿದಾಗ ಬೇಸರಗೊಂಡ ಬಸವಣ್ಣನ ಕನಸಿನಲ್ಲಿ ಸಾಕ್ಷತ್ ಸಂಗಮೇಶ್ವರನು ಬಂದು 'ಬಸವಾ ನಿನ್ನ ಮನೋರಥ ಪೂರೈಸುತ್ತದೆ. ಬಿಜ್ಜಳನಿರುವ ಮಂಗಳವಾಡಕ್ಕೆ ಹೋಗು, ನಾವು ನಿನ್ನನ್ನು ಅಗಲದೆ ನಿನ್ನ ಬೆನ್ನ ಹಿಂದೆಯೆ ಇರುವೆವು. ನಡೆ ಮಂಗಳವಾಡಕ್ಕೆ' ಎಂದಂತಾದಾಗ ಸಂಗಮೇಶ್ವರನ ಪೂಜೆಯ ಭಾಗ್ಯದಿಂದ ದೂರ ಸರಿಯುವುದಾದರೂ ಹೇಗೆ? ಎಂದು ನೊಂದುಕೊಂಡ ಬಸವಣ್ಣನು ಅವ್ಯಕ್ತ ಶಕ್ತಿಗೆ ಮಣಿದು ಮಂಗಳವಾಡಕ್ಕೆ ತೆರಳಲು ಸಿದ್ಧನಾಗುತ್ತಾನೆ. ಈ ವೇಳೆಗೆ ಚಾಲುಕ್ಯ ಅರಸನನ್ನು ಕುತಂತ್ರದಿಂದ ತಳ್ಳಿ ಸಿಂಹಾಸನವನ್ನು ಅಕ್ರಮಿಸಿದ್ದ ಬಿಜ್ಜಳನು ಈಗಿನ ಮಹಾರಾಷ್ಟ್ರದ ಪಂಡರಾಪುರದ ಸಮೀಪವಿರುವ ಮಂಗಳವಾಡೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು. ಬಸವಣ್ಣನ ಪಾದಸ್ಪರ್ಶದಿಂದ ಮಂಗಳವಾಡವು ಪಾವನವಾಯಿತು. ಬಸವಣ್ಣನು ಮಂಗಳವಾಡದಲ್ಲಿ ಕ್ರಿ.ಶ.೧೧೫೩ರವರೆಗೂ ಇದ್ದಂತೆ ತಿಳಿದುಬರುತ್ತದೆ. ಬಿಜ್ಜಳನು ತನ್ನ ಕಾರ್ಯಕ್ಷೇತ್ರವನ್ನು ಕಲ್ಯಾಣಕ್ಕೆ ಸ್ಥಳಾಂತರಿಸಿದಾಗ ಬಸವಣ್ಣನೂ ಅವನ ಜೊತೆ ಕಲ್ಯಾಣಕ್ಕೆ ಬರಬೇಕಾಯಿತು. ಮುಂದಿನ ಸಮಾಜೋಧಾರ್ಮಿಕ ಕಾರ್ಯಯೋಜನೆಯನ್ನು ಬಸವಣ್ಣ ಅಲ್ಲಿ ಪರಿಣಾಮಕಾರಿಯಾಗಿ ಜಾರಿಗೊಳಿಸಲು ಸಾಧ್ಯವಾಗುತ್ತದೆ.

## ಸಮಗ್ರ ಕ್ರಾಂತಿಯ ಹಾದಿಯಲ್ಲಿ:

ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕಕ್ರಾಂತಿಯ ಹರಿಕಾರರೆನಿಸಿದ ಬಸವಣ್ಣನು ಕೂಡಲ ಸಂಗಮದಿಂದ ಕಲ್ಯಾಣಿಚಾಲುಕ್ಯ ಸಾಮ್ರಾಜ್ಯದ ಸಾಮಂತನಾದ ಬಿಜ್ಜಳನಿದ್ದ ಮಂಗಳವಾಡಕ್ಕೆ ಹೋಗಿ ಅಲ್ಲಿ ಕಾಯಕ ತತ್ತ್ವಾನುಸಾರ ಮಂತ್ರಿ ಪದವಿಯನ್ನು ಒಪ್ಪಿ, ಅಂದು ಜಡ್ಡುಗಟ್ಟಿದ್ದ ಸಮಾಜ, ಧರ್ಮವನ್ನು ಪುನರುಜ್ಜೀವನಗೊಳಿಸುವ ಸಮಗ್ರಕ್ರಾಂತಿಯ ನೀಲನಕ್ಷೆಯನ್ನು ಮಂಗಳವಾಡದಲ್ಲಿಯೇ ತಯಾರಿಸುತ್ತಾನೆ. ಆತನ ಈ ಯೋಜನೆಗೆ ಧರ್ಮವೇ ತಳಹದಿಯಾಗಿತ್ತು ಎಂಬುದನ್ನು ಮರೆಯುವಂತಿಲ್ಲ.

### ಧಾರ್ಮಿಕ ಕ್ರಾಂತಿ:

೧೨ನೇ ಶತಮಾನದ ವೇಳೆಗಾಗಲೇ ಸನಾತನ ಧರ್ಮವು ಕೆಲವು ಪಟ್ಟಭದ್ರ ಹಿತಾಸಕ್ತಿಯುಳ್ಳ ಮೂಢನಂಬಿಕೆಯ ಸುಳಿಯಲ್ಲಿ ನಲುಗಿತ್ತು:

"ಧರ್ಮದ ವಿಷಯದಲ್ಲಿ ಬಸವಣ್ಣನವರು:

೧. ಹಳೆಯ ಧರ್ಮಗಳ ನೆಲೆ ಬೆಲೆಗಳನ್ನು ತೂಗಿ ನೋಡಿ ಕೊಳೆಯನ್ನು ಚೆಲ್ಲಬೇಕು, ಹೊಸದೊಂದನ್ನು ನಿರ್ಮಿಸಬೇಕು. ಬೆಳೆಯನ್ನು ಪಡೆಯಬೇಕು.

೨. ಏಕ ದೇವೋಪಾಸನೆಯನ್ನು ಮಾಡುವ ಧರ್ಮವಿರಬೇಕು.

೩. ಧಾರ್ಮಿಕ ವಿಧಿ, ವಿಧಾನ, ಶಿಕ್ಷಣ ಮೊದಲಾದವುಗಳೆಲ್ಲ ಎಲ್ಲರಿಗೂ ಇರಬೇಕು.

೪. ಧರ್ಮವು ಎಲ್ಲರ ಸೊತ್ತು, ಒಂದು ಧರ್ಮದ ಅನುಯಾಯಿಗಳಲ್ಲಿ ಮೇಲು-ಕೀಳೆಂಬ ಭಾವನೆಯಿರಬಾರದು-ಇತ್ಯಾದಿ ವಿಚಾರಗಳನ್ನು ಇಟ್ಟುಕೊಂಡಿದ್ದಂತೆ ಅವರ ವಚನಗಳು ಸಾರುತ್ತವೆ"[೬] ಎನ್ನುವ ಬಸವಣ್ಣನನ್ನು ಕುರಿತ ಜವಳಿಯವರ ಮಾತು ಸತ್ಯಕ್ಕೆ ಹತ್ತಿರವಾದುದಾಗಿದೆ.

'ದಯವೇ ಧರ್ಮದ ಮೂಲವಯ್ಯ'
'ನೀ ನೊಲಿದರೆ ಕೊರಡು ಕೊನರುವುದಯ್ಯ'
'ನಂಬಬಲ್ಲ ಭಕ್ತಂಗೆ ದೇವನೊಬ್ಬ ಕಾಣಿರೋ'
'ಆಚಾರವೇ ಸ್ವರ್ಗ ಅನಾಚಾರವೇ ನರಕ'
"ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ। ಪಾಪಿ ಹೂವನೇರಿಸಲು ಮಸದಡಾಯುಧದ ಗಾಯ।"
"ತನ್ನಶ್ರಯದ ರತಿ ಸುಖವನು, ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?
ತನ್ನ ಲಿಂಗಕ್ಕೆ ಮಾಡಬೇಕಾದ ನಿತ್ಯ ನೇಮವ ತಾ ಮಾಡಬೇಕಲ್ಲದೆ
ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?" –

ಎಂಬ ವಚನಗಳು ಧರ್ಮಾಚರಣೆಯಲ್ಲಿ ದಯೆ, ಆಚಾರ, ತಾಳ್ಮೆ ಇರಬೇಕು, ಡಾಂಭಿಕತೆಯಿಲ್ಲದ, ಪುರೋಹಿತ ವರ್ಗದಿಂದ ಮುಕ್ತವಾಗಿರುವ ಧರ್ಮವನ್ನು ನಿರ್ಮಿಸಬೇಕು ಎಂದು ಆತನ ಕನಸಾಗಿತ್ತು.

**ಸಾಮಾಜಿಕ ಕ್ರಾಂತಿ:** ಬಸವಣ್ಣ ನಿರ್ಮಿಸಬಯಸಿದ ಸಮ ಸಮಾಜದ ಕನಸು ಇಂದಿಗೂ ನಮಗೆ ಮಾದರಿಯಾಗಿದೆ. ಆತ ನಿರ್ಮಿಸಬಯಸಿದಸಮಾಜ ಶೋಷಣೆರಹಿತ, ಜಾತ್ಯಾತೀತ, ಲಿಂಗತಾರತಮ್ಯರಹಿತ, ಮೌಢ್ಯರಹಿತವಾದುದಾಗಿದೆ. ನಿಜಕ್ಕೂ ಆತನು ಸಮಾನತೆಯ ಹಂದರದಮೇಲೆ ನವಸಮಾಜವನ್ನು ನಿರ್ಮಿಸುವ ಪಣತೊಟ್ಟು ಕಾರ್ಯ ಪ್ರವೃತ್ತನಾಗಿದ್ದನು ಮತ್ತು ಆ ಮಾರ್ಗದಲ್ಲಿ ಮುನ್ನಡೆದನು. ಇಷ್ಟಲಿಂಗ ಧರಿಸಿದವರೆಲ್ಲರೂ ಸಮಾನರೆಂದು ಸಾರಿ ಮಾದಾರ ಚೆನ್ನಯ್ಯ, ಧೂಳಯ್ಯ, ಕೆಂಭಾವಿ ಭೋಗಣ್ಣ, ಸಮಗಾರ ಹರಳಯ್ಯ, ಢೋಹರ ಕಕ್ಕಯ್ಯ, ಸಂಭೋಳಿನಾಗಿದೇವ-ಮೊದಲಾದ ಕೆಳವರ್ಗದ ಅಸ್ಪೃಶ್ಯರೆನಿಸಿಕೊಂಡವರನ್ನು ಬಸವಣ್ಣ ಬಾಚಿತಬ್ಬಿಕೊಂಡು ಅನುಭವ ಮಂಟಪದಲ್ಲಿ ಸ್ಥಾನ ಕಲ್ಪಿಸಿಕೊಟ್ಟದ್ದು ಆ ಕಾಲಕ್ಕೆ ಅದು ಪುರೋಹಿತಷಾಹಿ ವರ್ಗದ ಬಂಡಾಯವೆಂದೇ ಹೇಳಬಹುದು.

'ಮಾದಾರ ಚೆನ್ನಯ್ಯನ ಮನೆಯ ಮಗನಾನಯ್ಯ'
'ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ, ಜಲವೊಂದೆ
ಶೌಚಾಚಮನಕ್ಕೆ, ಕುಲವೊಂದೆ ತನ್ನ ತಾನರಿದವನಿಗೆ'

---

೬. ಡಾ.ಬಿ.ಸಿ ಜವಳಿ. ಬಸವಣ್ಣನವರ ಯೋಜನೆಗಳು- ಕರ್ನಾಟಕ ವಿ.ವಿ. ಧಾರವಾಡ ಪುಟ-೩೩

'ಕೊಲುವನೇ ಮಾದಿಗ, ಹೊಲಸು ತಿಂಬವ ಹೊಲೆಯ,
ಕುಲವೇನೊ ಆದಂದಿರ ಕುಲವೇನೊ?
ಸಕಲ ಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲ ಸಂಗನ ಶರಣರೆ ಕುಲಜರು'

ಎಂದು ಹೇಳುವ ಮೂಲಕ ವರ್ಣಾಶ್ರಮಪ್ರೇಮಿಗಳಿಗೆ ಮಾತಿನ ಚಾಟಿಬೀಸಿದನು. ಸ್ತ್ರೀ ಸಮಾನತೆಗೆ ಹೋರಾಡಿದನು. "ಮೇಲ್ವರ್ಗದ ಕನ್ಯೆ ಯೊಬ್ಬಳು ಕೆಳವರ್ಗದ ವರನ ಕೈ ಹಿಡಿದು ಬದುಕು ಸಾಗಿಸಿವುದನ್ನು ೮೦೦ ವರ್ಷಗಳ ಹಿಂದೆ ಶರಣರು ಕಣ್ಣಾರೆ ಕಂಡಿದ್ದಾರೆ. ಜಾತಿಗಳ ನಿರ್ಮೂಲನ ಮಾಡುವ ಕುರಿತು ಬರೀ ಹೇಳದೆ ಶರಣರು ಈ ಮದುವೆ ಮಾಡಿಸುವುದರ ಮೂಲಕ ಅದನ್ನು ಆಚರಣೆಯಲ್ಲಿ ತಂದಿದ್ದಾರೆ"[೭] 'ಕಾಯಕವೇ ಕೈಲಾಸ' ಎಂದು ಸಾರಿ ಎಲ್ಲರೂ ದುಡಿದುತಿನ್ನಬೇಕೆಂಬ ಮನೋಭಾವ ಮೂಡಿಸಿದರು. "ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ"

ಎಂದು ಹೇಳಿ ಅತಿಯಾದ ಸಂಗ್ರಹ ಬುದ್ಧಿಯನ್ನು ಧಿಕ್ಕರಿಸಿದನು. ಸಾಮಾಜಿಕ ಹಾಗೂ ಆರ್ಥಿಕ ಕ್ರಾಂತಿಯ ಮೂಲಕ ತರತಮರಹಿತ ಸಮಸಮಾಜವನ್ನು ನಿರ್ಮಿಸ ಹೊರಟರು.

**ರಾಜಕೀಯ ಕ್ರಾಂತಿ:**

"ಬಸವಣ್ಣನ ಕಾರ್ಯರಂಗವೆಲ್ಲ ರಾಜಕೀಯವಾಗಿದ್ದರೂ ಅವರ ವಚನಗಳಲ್ಲಿ ವಿಶೇಷವಾಗಿ ಆಧ್ಯಾತ್ಮಕವಿಚಾರಗಳೇ ಹೆಚ್ಚಾಗಿ ಅವರು ರಾಜಕೀಯ ರಂಗವನ್ನು ಪ್ರವೇಶಿಸುವ ಉದ್ದೇಶವಾದರೂ ಏನಿತ್ತೋ ತಿಳಿಯದಾಗಿದೆ. ಪ್ರಾಯಶಃ ತಮ್ಮ ಸಾಮಾಜಿಕ ಸುಧಾರಣೆಗಳನ್ನು ಕಾರ್ಯಗತ ಮಾಡಲು ರಾಜಕೀಯವನ್ನು ಪ್ರವೇಶಿಸಿವುದು ಅವಶ್ಯವೆಂದೆನಿಸಿರಬೇಕು, ಅಂದಿನ ರಾಜಕಾರ್ಯದಲ್ಲಿಯೂ ಒಂದು ಹೊಸ ಚೈತನ್ಯವನ್ನು ತರುವ ಉದ್ದೇಶವಿರಬೇಕು; ಅಲ್ಲಿಯ ಕೊಳೆಯನ್ನು ತೊಳೆದು ಹಾಕುವುದು, ಜನತೆಗೆ ಒಳ್ಳೆಯ ಅವಕಾಶಗಳನ್ನು ಕಲ್ಪಿಸಿಕೊಡುವುದು ಅವರ ಉದ್ದೇಶವಿರಬೇಕು."[೮] ಎನ್ನುವ ಜವಳಿಯವರು ಬಸವಣ್ಣನ ಕಾರ್ಯಕಾರಣಗಳನ್ನು ಶೋಧಿಸಿದ್ದು ವಾಸ್ತವಕ್ಕೆ ಹತ್ತಿರವಾದ ಸಂಗತಿಗಳಾಗಿವೆ.

*'ಶಿವಭಕ್ತರ ನೋವೇ ಅದುವೇ ಲಿಂಗದ ನೋವು'* ಎಂದು ಸಾರಿದ ಬಸವಣ್ಣನು ಆ ಮೂಲಕ ಪ್ರಜಾ ಕಲ್ಯಾಣದ ಮಹತ್ವವನ್ನು ಎತ್ತಿ ಹಿಡಿದನು. ಪರರಿಗೆ ಉಪದೇಶ ಮಾಡುವ ನಾಡಿನ ನಾಯಕರು ಉಪದೇಶಕ್ಕೆ ತಾವು ಅರ್ಹರಿರುವರೇ ಎಂಬ ಮಾತನ್ನು ಮೊದಲು ಪರೀಕ್ಷಿಸಿಕೊಳ್ಳಬೇಕೆಂದು:

"ಲೋಕದ ಡೊಂಕ ನೀವೇಕೆ ತಿದ್ದುವಿರಿ?
ನಿಮ್ಮ ತನುವ ಸಂತೈಸಿಕೊಳ್ಳಿ;
ನಿಮ್ಮ ಮನವ ಸಂತೈಸಿಕೊಳ್ಳಿ ;"
"ಪರ ಚಿಂತೆ ಎನಗೆ ಏಕೆ ಅಯ್ಯ?
ಎಮ್ಮಚಿಂತೆ ಎಮಗೆ ಸಾಲದೇ?"-*ಎಂದು ಹಾಡಿದನು.*

---

೭. ಡಾ॥ ಬಿ.ಸಿ. ಜವಳಿ. ಬಸವಣ್ಣನವರ ಯೋಜನೆಗಳು. ಕ.ವಿ.ವಿ. ಧಾರವಾಡ-ಪುಟ-೫೩

ಅನ್ಯರಸುಧಾರಣೆಗೆ ಕೈಹಾಕುವವರು ಮೊದಲು ತಮ್ಮನ್ನು ತಾವು ಸುಧಾರಿಸಿಕೊಳ್ಳಬೇಕೆಂಬುದು ಆತನ ಆಶಯವಾಗಿತ್ತು.

ಬಸವಣ್ಣನು ಬಿಜ್ಜಳನ ಕೈಕೆಳಗಿದ್ದನು. ಅರಸನನ್ನು ಒಪ್ಪಿಕೊಂಡರೂ ಸಹ ಅರಸೊತ್ತಿಗೆಯು (king ship) ಶಾಶ್ವತ ಅಲ್ಲ ಎಂದು ಸಾರಿದನು. '*ಅರಸು ವಿಚಾರ, ಸಿರಿಯ ಶೃಂಗಾರ ಸ್ಥಿರವಲ್ಲ ಮಾನವ*' ಎಂಬ ಆತನ ಸಾಲುಗಳಲ್ಲಿ ಅದು ವ್ಯಕ್ತವಾಗುತ್ತದೆ.

ರಾಜ್ಯದಲ್ಲಿ ನ್ಯಾಯವು ಸರ್ವರಿಗೂ ಸಮಾನವಾಗಿಯೂ, ಸತ್ಯವಾಗಿಯೂ ದೊರೆಯ ಬೇಕು. ನ್ಯಾಯದ ಮುಂದೆ ನನ್ನವರು-ಪರರು ಎಂಬ ಭೇದ ಇರಬಾರದೆಂದು

'ನ್ಯಾಯ ನಿಷ್ಠುರಿ: ದಾಕ್ಷಿಣ್ಯಪರ ನಾನಲ್ಲ,
ಲೋಕವಿರೋಧಿ; ಶರಣನಾರಿಗೂ ಅಂಜುವನಲ್ಲ;' ಎಂದು ಸಾರಿದನು.

ಬಿಜ್ಜಳನ ಪ್ರಧಾನ ದಂಡನಾಯಕ ಸ್ಥಾನವನ್ನಲಂಕರಿಸಿದ್ದ ಬಸವಣ್ಣನು ಕರಣಿಕರು ಹಾಗೂ ರಾಜಕುಮಾರರು ನಡೆಸುತ್ತಿದ್ದ ಭ್ರಷ್ಟಾಚಾರವನ್ನು ಕಿತ್ತೊಗೆಯಲು ಶ್ರಮಿಸಿದನು. "ಸಶಕ್ತ ನಿರುದ್ಯೋಗಿಗಳನ್ನು ಕಾಯಕಕ್ಕೆ ನಿಯೋಜಿಸಿದರು. ಇದರಿಂದ ಬರುವ ಆದಾಯದಿಂದ ನಿಶ್ಯಕ್ತರನ್ನು ಪೋಷಿಸುವ ವ್ಯವಸ್ಥೆ ಮಾಡಿದರು. ನೀರು ಹಾಯಿಸುವವರ ಮೂಲಕ ಬರುವ ಬೆಳೆಯ ಲಾಭದ ಮೇಲೆ 'ದಂಡ' ಎಂಬ ತೆರಿಗೆಯನ್ನು ಜಾರಿಗೆ ತಂದರು. ಸುಖ ಸಾಧನಗಳ ಮೇಲೆ 'ಉಂಡಿಗೆ' ತೆರಿಗೆ ವಿಧಿಸಿದರು. ದೇಶದೊಳಗೆ ಬರುವ ಹೋಗುವ ಸಾಮಾನುಗಳ ಮೇಲೆ ಸುಂಕವನ್ನು ವಿಧಿಸಿದರು. ಭೂಮಿಯ ರಕ್ಷಣಕ್ಕಾಗಿ ತಳವರಿಕೆ (land tax) ವಿಧಿಸಲಾಯಿತು. ಹೊಲಗದ್ದೆ ಸಾಗುವಳಿಕೆಯ ಬೆಳೆಗುತ್ತಿಗೆಕರ (Agriculture income tax) ವಿಧಿಸಿದರು. ಹೀಗೆ ಒಟ್ಟು ಹದಿಮೂರು ರೀತಿಯ ಕರಗಳನ್ನು ವಿಧಿಸಿ ಬೊಕ್ಕಸ ತುಂಬುವಂತೆ ಮಾಡಿ ಹೊನ್ನು ಹೊಳೆ ಹರಿಯಿಸಿದರು."[೮] ಕಾಯಕ ಮಹತ್ವವನ್ನು ಎಲ್ಲರಿಗೂ ಅರ್ಥೈಸಿ ಅದನ್ನು ಕಡ್ಡಾಯ ಮಾಡಿ ರಾಜ್ಯದ ಆದಾಯವನ್ನು ಹೆಚ್ಚಿಸಿ ಜನಪರ ಕಾರ್ಯಗಳಲ್ಲಿ ಅದನ್ನು ವಿನಿಯೋಗಿಸಿದ್ದನ್ನು ಇಲ್ಲಿ ಕಾಣಬಹುದು. ಈ ಕಾಲದಲ್ಲಿ ಕಲ್ಯಾಣವು ಸಮಗ್ರ, ಸಮ್ಯಕ್ ಕಲ್ಯಾಣವನ್ನು ಕಂಡಿತು.

ಹೀಗೆ ಬಸವಣ್ಣನು ತನ್ನ ಉದಾರ ಮನೋಭಾವ ಹಾಗೂ ದೂರದೃಷ್ಟಿಯಿಂದ ನಾಡನ್ನು ಸಮಗ್ರ ಕ್ರಾಂತಿಯೆಡೆಗೆ ಕೊಂಡೊಯ್ದದ್ದನ್ನು ಕಾಣಬಹುದು.

---

೮. ಡಾ॥ ಬಿ.ಸಿ. ಜವಳಿ. ಬಸವಣ್ಣವನರ ಯೋಜನೆಗಳು. ಕ.ವಿ.ವಿ. ಧಾರವಾಡ ಪುಟ-೬೦

## ಅನುಭವಮಂಟಪದ ಸ್ಥಾಪನೆ :

ಜಗತ್ತಿನ ಚರಿತ್ರೆಯಲ್ಲಿಯಲ್ಲಿ 'ಅನುಭವಮಂಟಪ'ವೆಂಬ ಪರಿಕಲ್ಪನೆಯೇ ಅದ್ಭುತವಾದದ್ದು. ಇದು ವಿಶ್ವದ ಮೊದಲ 'ಸಂಸತ್ತು' ಎಂದರೆ ಅತಿಶಯೋಕ್ತಿಯಾಗಲಾರದು. ಅನುಭವ ಮಂಟಪವೆಂಬುದು ಒಂದು ಕಾಲ್ಪನಿಕ ಸಂಸ್ಥೆಯೆಂದು ಕೆಲವರು ವಾದಿಸುತ್ತಾರೆ. ಆದರೆ ಅದು ನಿಜವಾಗಿಯೂ ಅಸ್ತಿತ್ವದಲ್ಲಿದ್ದ ಸಂಸ್ಥೆಯಾಗಿತ್ತೆಂಬುದಕ್ಕೆ ವಚನಗಳಲ್ಲಿಯೇ ಆಧಾರಗಳು ಸಿಕ್ಕುತ್ತವೆ. ಅನುಭವ ಮಂಟಪದ ಐತಿಹಾಸಿಕತೆಯ ಬಗ್ಗೆ ಬಸವಣ್ಣನವರ ಧರ್ಮಪತ್ನಿ ನಿಲಾಂಬಿಕೆಯ

ಚನ್ನ ಬಸವಣ್ಣನೆಂಬ ಪ್ರಸಾದಿಯ ಪಡೆದು
ಅನುಭವ ಮಂಟಪವನ್ನು ಮಾಡಿ,
ಅನುಭವ ಮೂರ್ತಿಯಾದ ನಮ್ಮ ಬಸವಯ್ಯನು
ಅರಿವ ಸಂಪಾದಿಸಿ, ಆಚಾರವನಂಗಗೊಳಿಸಿ
ಏಳುನೂರಿಪ್ಪತ್ತು ಗಣಂಗಳ
ಅನುಭವ ಮೂರ್ತಿಗಳ ಮಾಡಿದಾತ ನಮ್ಮ ಬಸವಯ್ಯನು
ಈ ಅನುಭವದಲ್ಲಿ ಐಕ್ಯ ಪ್ರಸಾದವನಂಗಗೊಂಡು,
ಮಂತ್ರ ನಿರ್ಮಂತ್ರವಾದಂ ನಮ್ಮ ಬಸವಯ್ಯನು
ಭಕ್ತಿ ಸ್ಥಳವನಳಿದಯ ಭಾವವಡಗಿ ಬಟ್ಟಬಯಲ
ಸಂಗಯ್ಯನಲ್ಲಿ ಸ್ವಯಂಲಿಂಗಿಯಾದ ನಮ್ಮ ಬಸವಯ್ಯನು.

ಎಂಬ ವಚನವು ಅನುಭವ ಮಂಟಪದ ಅಸ್ತಿತ್ವವನ್ನು ಸಾರಿ ಹೇಳುವುದಲ್ಲದೆ ಅದು ಗೈದ ಸಾಧನೆಯ ಬಗೆಗೆಯೂ ಸ್ಪಷ್ಟ ಚಿತ್ರಣವನ್ನು ನಮ್ಮ ಮುಂದಿಡುತ್ತದೆ.

ಅನುಭವ ಮಂಟಪದಲ್ಲಿ ಲೌಕಿಕ ಹಾಗೂ ಪಾರಮಾರ್ಥಿಕಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ಚರ್ಚೆ ನಡೆಯುತ್ತಿತ್ತು. ಇಲ್ಲಿ ಜಾತಿ, ಮತ, ಲಿಂಗ, ಅಂತಸ್ತಿನ ಭೇದವಿಲ್ಲದೆ ಎಲ್ಲಾ ವರ್ಗದ ಜನರು ಮುಕ್ತವಾಗಿ ಭಾಗವಹಿಸುತ್ತಿದ್ದರು. ಸಿಂಪಿಗರ ಶಂಕರದಾಸಿಮಯ್ಯ, ಹಡಪದ ಅಪ್ಪಣ್ಣ, ಹೆಂಡದ ಮಾರಯ್ಯ, ಆಯ್ದಕ್ಕಿ ಮಾರಯ್ಯ, ಅಂಬಿಗರ ಚೌಡಯ್ಯ, ಉರಿಲಿಂಗಪೆದ್ದ, ಮಾದಾರ ಚೆನ್ನಯ್ಯ, ತುರುಗಾಹಿ ರಾಮಣ್ಣ, ಸೂಜಿರಾಮಿತಂದೆ, ಕನ್ನದ ಮಾರಿತಂದೆ, ಕೋಲಶಾಂತಯ್ಯ, ಬೇಡರ ಸಂಗಯ್ಯ, ವಚನ ಭಂಡಾರಿ ಶಾಂತರಸ, ನುಲಿಯ ಚಂದಯ್ಯ, ಬಡಿಗ ಬಸವಯ್ಯ ಎಂಬ ಇನ್ನೂ ಮುಂತಾದ ಶರಣರು, ಅಕ್ಕಮಹಾದೇವಿ, ಅಕ್ಕ ನಾಗಮ್ಮ, ಗಂಗಾಂಭಿಕೆ, ನೀಲಾಂಬಿಕೆ, ಕಸಗುಡಿಸುವ ಸತ್ಯಕ್ಕ, ಅಕ್ಕಮ್ಮ, ಕದಿರೆ ರೆಮ್ಮವ್ವೆ, ಕೊಟ್ಟಣದ ಸೋಮವ್ವೆ, ಸೂಳೆ ಸಂಕವ್ವ ಎಂಬ ಇನ್ನೂ ಮುಂತಾದ ಶರಣೆಯರು ಸೇರಿ ಸುಮಾರು ಮೂರುನೂರ ಮೂವತ್ತಕ್ಕಿಂತ ಹೆಚ್ಚು ಶರಣ–ಶರಣೆಯರು ಅನುಭವ ಮಂಟಪದ ಚರ್ಚೆಯಲ್ಲಿ ಭಾಗವಹಿಸುತ್ತಿದ್ದರು. ಅಲ್ಲಮಪ್ರಭುಗಳು ಇದರ ಅಧ್ಯಕ್ಷರಾದರೆ, ಬಸವಣ್ಣನೇ ಪ್ರಧಾನಿ.

ಅನುಭವ ಮಂಟಪದ ಚರ್ಚೆಗಳೆಲ್ಲವೂ ಕಾಯಕ–ದಾಸೋಹ ತತ್ವವನ್ನು ಕೇಂದ್ರ ಬಿಂದುವಾಗಿಟ್ಟುಕೊಂಡೇ ನಡೆಯುತ್ತಿದ್ದವು. ಈ ತತ್ವವೇ ಶರಣ ಧರ್ಮದ ತಿರುಳಾಗಿತ್ತು. ಚರ್ಚೆಯ ಫಲವಾಗಿ ಹೊರಹೊಮ್ಮಿದ ವಚನಸಾಹಿತ್ಯರತ್ನವು ಅಖಂಡ ಮಾನವ ಜನಾಂಗದ ಉನ್ನತಿಗೆ ಹಿಡಿದ ಬೆಳಕಿಂಡಿಯಾಗಿದೆ. ವರ್ಗರಹಿತ, ಸಂಘರ್ಷರಹಿತ, ಸ್ಥಾನರಹಿತ, ಡಾಂಭಿಕತೆಯಿರದ, ಸಮ ಬಾಳ್ವೆಯ ಸಮಾಜದ ಆಶಯ ಇಲ್ಲಿ ಮೂಡಿ ಬಂದ ವಚನಗಳಲ್ಲಿ ಮೇಳೈಸಿದೆ.

**ಕಲ್ಯಾಣ ಕ್ರಾಂತಿ:**

ಬಸವಣ್ಣನು ರೂಪಿಸಿದ ಸಮಾಜೋಧಾರ್ಮಿಕ ತತ್ವಗಳನ್ನು ಶರಣರೆಲ್ಲರು ಒಪ್ಪಿ ಅವುಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳತೊಡಗುತ್ತಾರೆ. ಕಾಯಕಗೌರವ, ಏಕದೇವೋಪಾಸನೆ, ಲಿಂಗಧಾರಣೆ, ಸ್ತ್ರೀಸಮಾನತೆ, ದಯೆ ಮುಂತಾದ ತತ್ವಗಳು ಅನುಸರಣೆಗೆ ಬರತೊಡಗುತ್ತವೆ. ಅಸ್ಪೃಶ್ಯತೆ, ವೇಶ್ಯಾವಾಟಿಕೆ, ಢಾಂಭಿಕತೆ, ಕಳ್ಳತನ, ವಂಚನೆಗಳಂತಹ ನಕಾರಾತ್ಮಕಚಟುವಟಿಕೆಗಳು ನಿಧಾನವಾಗಿ ಕರಗತೊಡಗುತ್ತವೆ. 'ಬಿಜ್ಜಳರಾಯನ ಕಲ್ಯಾಣ ರಾಜ್ಯವು' ಬಸವಣ್ಣನ ಕೃಪೆಯಿಂದ 'ಪ್ರಜಾಕಲ್ಯಾಣ ರಾಜ್ಯ'ವಾಗಿ ರೂಪುತಳೆಯುತ್ತಿರುತ್ತದೆ. ಹೀಗಿರುವಾಗ ಒಮ್ಮೆ ಮೊಚ್ಚೆಗಾರ ವೃತ್ತಿಯ ಹರಳಯ್ಯನು ಬಸವಣ್ಣನನ್ನು ಕಂಡು 'ಶರಣು' ಎನ್ನುತ್ತಾನೆ. ಬಸವಣ್ಣನು ಪ್ರತಿಯಾಗಿ 'ಶರಣು ಶರಣು' ಎಂದು ವಂದಿಸಿ ಮುನ್ನಡೆಯುತ್ತಾನೆ. ಸ್ವತಃ ಕ್ರಾಂತಿಯೋಗಿ ಬಸವಣ್ಣನೇ ತನಗೆ ಎರಡು ಬಾರಿ ಶರಣು ಶರಣು ಎಂದು ವಂದಿಸಿದ್ದರಿಂದ ಹರಳಯ್ಯನಿಗೆ ದಿಕ್ಕು ತೋಚದಾಗಿ ಋಣಭಾರದ ಗೊಂದಲಕ್ಕೆ ತುತ್ತಾಗಿ ತನ್ನ ಬಲತೊಡೆ ಹಾಗು ಮಡದಿ ಕಲ್ಯಾಣಿಯ ಎಡ ತೊಡೆಯ ಚರ್ಮದಿಂದ ಚಮ್ಮಾವುಗೆಗಳನ್ನು ತಯಾರಿಸಿ ಬಸವಣ್ಣನಿಗೆ ಅರ್ಪಿಸುತ್ತಾರೆ. ಸ್ವೀಕರಿಸಲೊಲ್ಲದ ಬಸವಣ್ಣನು ಅದನ್ನು ಶಿವನಿಗೇ ಅರ್ಪಿಸಲು ಹೇಳಿ ಕಳುಹಿಸುತ್ತಾನೆ.

ಹರಳಯ್ಯನು ನೊಂದಮನಸ್ಸಿನಿಂದ ಮನೆಗೆ ಹಿಂದಿರುಗುತ್ತಿರುವಾಗ ದಾರಿಯಲ್ಲಿ ಬಿಜ್ಜಳನ ಆಸ್ಥಾನ ಮಂತ್ರಿ ಬ್ರಾಹ್ಮಣ ಮಧುವರಸನು ಭೇಟಿಯಾಗಿ ನಡೆದ ವೃತ್ತಾಂತವನ್ನು ಕೇಳಿ ಹರಳ್ಯಯನ ಬಗೆಗೆ ಗೌರವಮೂಡುತ್ತದೆ. ತಾನೂ ಸಹ ದೀಕ್ಷೆ ತೆಗೆದುಕೊಂಡು ಶರಣ ಸಮುದಾಯವನ್ನು ಸೇರಿ ಶಿವಯೋಗ ಸಾಧನೆಯ ಬರದಿಂದ ಮುಂದುವರಿದು ಆತ ಹರಳಯ್ಯನ ಮಗ ಶೀಲವಂತನನ್ನು ತನ್ನ ಮಗಳು ಲಾವಣ್ಯಳಿಗೆ ಕೊಟ್ಟು ಮದುವೆ ಮಾಡಲು ಬಯಸುತ್ತಾನೆ. ಹರಳಯ್ಯನೆದುರು ಇದನ್ನು ಪ್ರಸ್ತಾಪಿಸಿದಾಗ ಹರಳಯ್ಯ ಹಿಂಜರಿಯುತ್ತಾನೆ. ಆದರೆ ಮಧುವರಸನು ಶರಣರಲ್ಲಿ ಕುಲವನರಸಬಾರದೆಂದು ಶರಣಧರ್ಮ ಹೇಳುತ್ತದೆ ಎಂದು ಉಪದೇಶ ಹೇಳುವುದನ್ನು ಕಾಣಬಹುದು.

'ಜಾತಿ ಜಾತಿ ಕೂಡಿದಲ್ಲದೆ ನಿಹಿತ ಸುಖವಿಲ್ಲ' ಎಂದು ಬಯಸಿದ ಇಬ್ಬರೂ ತಮ್ಮ ಮಕ್ಕಳ ವಿವಾಹಕ್ಕೆ ಮುಂದಾಗುತ್ತಾರೆ. "ಬಸವಣ್ಣನು ಸಹ ಶಿವಾಚಾರದ ಬಗ್ಗೆ ತಮಗಿರುವ ನಿಷ್ಠೆ ಇಷ್ಟುಬೇಗನೆ ಈ ರೀತಿ ಫಲಪ್ರದವಾಗುವುದನ್ನು ನೋಡಿ ಆನಂದ ತುಂದಿಲರಾಗುತ್ತಾನೆ.

ಆದರೆ ತಮ್ಮ ದಿವ್ಯದೃಷ್ಟಿಯಿಂದ ಮುಂದಾಗುವ ಅನಾಹುತವನ್ನರಿತ ಪ್ರಭುದೇವರು ಅನುಭವ ಮಂಟಪದಲ್ಲಿ ಶರಣರೊಂದಿಗೆ ಗೋ ನಡೆಸಿ, ಶರಣರನ್ನುದ್ದೇಶಿಸಿ ನೀವು ಭೂಮಿಗೆ ಬಂದ ಮಣಿಹ ಮುಗಿಯಿತು. ನೀವೆಲ್ಲ ಐಕ್ಯಸ್ಥಲವನ್ನು ಮುಟ್ಟಿ ಆಧ್ಯಾತ್ಮ ಸಾಧನೆಯ ತುತ್ತ ತುದಿಯನ್ನು ತಲುಪಿದ್ದೀರಿ. ಈಗ ನೀವೆಲ್ಲ ಲಿಂಗವಾಗಬೇಕು. ಕಲ್ಯಾಣ ಬಿಟ್ಟು ಉಚಿತ ಸ್ಥಳಗಳಿಗೆ ಹೋಗಿ ಐಕ್ಯವಾಗಬೇಕೆಂದು ಆ ದೇಶ ನೀಡುತ್ತಾರೆ."[೯]

ಹರಳಯ್ಯ-ಮಧುವರಸರಮಕ್ಕಳ ಪ್ರತಿಲೋಮ ವಿವಾಹವನ್ನು ತಮ್ಮ ಸ್ವಾರ್ಥಕ್ಕೆ ತಕ್ಕಂತೆ ಬಳಸಿಕೊಂಡ ಸಂಪ್ರದಾಯಸ್ಥರು ಮಂಚಣ್ಣನೊಂದಿಗೆ ಸೇರಿ ಬಸವಣ್ಣನ ವಿರುದ್ಧ ಪಿತೂರಿ ನಡೆಸಿ, ವರ್ಣಸಂಕರ ಮಾಡಿದವರ ಸದ್ದನ್ನಡಗಿಸದಿದ್ದರೆ ರಾಜ ಪ್ರಜೆಗಳಿಗೆ ದ್ರೋಹ ಬಗೆದಂತಾಗುತ್ತದೆಂದು ಬಿಜ್ಜಳನ ಕಿವಿತುಂಬುತ್ತಾರೆ. ಆದರೆ ತನ್ನ ಸಾಮ್ರಾಜ್ಯಕ್ಕೆ ಒಂದು ಗೊತ್ತು ಗುರಿಯನ್ನು ಕಲ್ಪಿಸಿಕೊಟ್ಟು, ಅದು ಉಚ್ಛ್ರಾಯಸ್ಥಿತಿಗೆ ಬರುವುದಕ್ಕೆ ಕಾರಣರಾದ ಬಸವಣ್ಣನನ್ನು ಸುಲಭವಾಗಿ ಆತ ಕಡೆಗಣಿಸಲಾಗದೆ ನಡೆದ ಸಂಗತಿಯನ್ನು ವಿಚಾರಣೆಗೆ ಒಳಪಡಿಸುತ್ತಾನೆ. ಬಸವಣ್ಣನು ಮುಂದಾಗುವ ಅನಾಹುತವನ್ನು ನೆನೆದು;

ಅರಸು ವಿಚಾರ ಸಿರಿಯು ಶೃಂಗಾರ, ಸ್ಥಿರವಲ್ಲ ಮಾನವಾ
ಕೆಟ್ಟಿತ್ತು ಕಲ್ಯಾಣ, ಹಾಳಾಯಿತು ನೋಡಾ ಒಬ್ಬ ಜಂಗಮದ ಅಭಿಮಾನದಿಂದ
ಚಾಳುಕ್ಯ ರಾಯನ ಆಳಿಕೆ ತೆಗೆಯಿತ್ತು;
ಸಂದಿತ್ತು ಕೂಡಲ ಸಂಗಮದೇವಾ ನಿಮ್ಮ ಕವಳಿಗೆಗೆ

ಎಂದು ಮನನೊಂದು, ಶರಣ ನಿಂದೆ ಶಿವದ್ರೋಹ ನಡೆದಲ್ಲಿ ಸ್ಥಳತ್ಯಾಗ ಮಾಡುವ ಗಣಾಚಾರರ ಸೌಮ್ಯ ಪ್ರತಿಭಟನೆಯನ್ನೇ ಅನುಸರಿಸಿ ಅಧಿಕಾರವನ್ನು ತ್ಯಜಿಸಿ ಕೂಡಲ ಸಂಗಮಕ್ಕೆ ತೆರಳುತ್ತಾನೆ. ಬಿಜ್ಜಳನು ಹರಳಯ್ಯ ಮತ್ತು ಮಧುವಯ್ಯರನ್ನು ಅಪರಾಧಿಗಳೆಂದು ನಿರ್ಣಯಿಸಿ ಅವನ ಕಣ್ಣು ಕೀಳಿಸಿ, ಎಳೆಹೂಟೆ ಶಿಕ್ಷೆವಿಧಿಸಿ ಅವರನ್ನು ಆನೆಯ ಕಾಲಿಗೆ ಕಟ್ಟಿಸಿ ಕ್ರೂರವಾಗಿ ಕೊಲ್ಲಿಸುತ್ತಾನೆ. ಇದರಿಂದ ಕಲ್ಯಾಣದಲ್ಲಿ ಪ್ರಕ್ಷುಬ್ಧ ಪರಿಸ್ಥಿತಿಯುಂಟಾಗಿ ನರಮೇಧವೇ ನಡೆಯುತ್ತದೆ. ಈ ನಡುವೆ ಜಗದೇವ, ಮೊಲ್ಲ ಮತ್ತು ಬೊಮ್ಮ ಎಂಬ ಮೂವರು ವ್ಯಕ್ತಿಗಳು ಬಿಜ್ಜಳನನ್ನುಕೊಲ್ಲುತ್ತಾರೆ. ಈ ಬಗ್ಗೆ ಬಸವ ಪುರಾಣದಲ್ಲಿ ಹೇಳಿರುವಂತೆ *'ತದ್ರೋಹಿಯನಪಹರಿಸಿ ನನ್ನಿಯಂ ಮೆರೆ'* ಎಂದು ಬಸವಣ್ಣನು ಜಗದೇವನಿಗೆ ಆದೇಶವಿತ್ತು ಅದರ ಪರಿಣಾಮವಾಗಿ ಬಿಜ್ಜಳನ ಕೊಲೆಯಾಯಿತು ಎಂಬ ವಾದವೊಂದಿದೆ. ಆದರೆ ತೆಲುಗು, ತಮಿಳು ಕೃತಿಗಳು ಹಾಗೂ ಶಾಸನಗಳ ಆಧಾರದ ಮೇಲೆ "ಬಸವೇಶ್ವರ ಬಿಜ್ಜಳರಲ್ಲಿದ್ದ ಧಾರ್ಮಿಕ ಮತಭೇದಗಳು ಬಿಜ್ಜಳನ ಸಾವಿಗೆ ಕಾರಣವಾಗದೆ ಅವನ ಸಾವಿಗೆ ರಾಜಕೀಯ ಘಟನೆಗಳೇ ಕಾರಣ"[೧೦] ಎಂಬ ಮತ್ತೊಂದು ವಾದವೂ ಸಹ ಇದೆ.

---

೯ ಪ್ರೊ.ಬಿ.ವಿರೂಪಾಕ್ಷಪ್ಪ. ವಿಶ್ವಜ್ಯೋತಿ ಬಸವಣ್ಣವನರು. ಪುಟ-೧೪೩

೧೦. ಪ್ರೊ.ಬಿ.ವಿರೂಪಾಕ್ಷಪ್ಪ .ವಿಶ್ವಜ್ಯೋತಿ ಬಸವಣ್ಣವನರು. ಪುಟ-೧೫೦

## ಬಸವಣ್ಣನವರ ಐಕ್ಯ:

ಪ್ರತಿಲೋಮ ವಿವಾಹದ ಅಪವಾದದ ಮೇಲೆ ಹರಳಯ್ಯ ಮತ್ತು ಮಧುವಯ್ಯರಿಗೆ ಎಳೆಹೊಟೆ ಶಿಕ್ಷೆ ಜಾರಿಗೆ ಬಂದು ಅವರು ಪ್ರಾಣಬಿಡುತ್ತಾರೆ. ನಂತರ ನಡೆದ ಬಿಜ್ಜಳನ ಕೊಲೆಯ ಅಪವಾದ ಶರಣರ ಮೇಲೆ ಬಂದು ಕೂಡಲಸಂಗಮದಲ್ಲಿದ್ದ ಬಸವಣ್ಣನಿಗೆ ಈ ವಿಷಯ ಹಡಪದ ಅಪ್ಪಣ್ಣನ ಮುಖಾಂತರ ತಿಳಿಯುತ್ತದೆ. ಒಂದು ಕಡೆ ತಾನೇ ತೋರಿದ ದಾರಿಯಲ್ಲಿ ನಡೆದ ಹರಳಯ್ಯ-ಮಧುವಯ್ಯನವರ ಧಾರುಣ ಮರಣ, ಮತ್ತೊಂದುಕಡೆ ಬಿಜ್ಜಳನ ಸಾವು ಮತ್ತು ಈ ಕುರಿತಂತೆ ತಮ್ಮ ಮೇಲೆ ಬಂದಂತಹ ಆಪಾದನೆಗಳು ಬಸವಣ್ಣನ ಸ್ಥಿತಪ್ರಜ್ಞತೆಯನ್ನು ಕದಲಿಸುತ್ತದೆ. "ಪ್ರಭುದೇವರು ಮೊದಲೇ ಎಚ್ಚರಿಸಿದಂತೆ ತಮ್ಮ ಮಣಿಹ ಈಲೋಕದಲ್ಲಿ ಮುಗಿಯಿತೆಂದು ಭಾಸವಾಗಿ ಕಾಯ ಜೀವನ ಹೊಲಿಗೆಯನ್ನು ಬಿಚ್ಚುವ ಕ್ರಮದಿಂದ ಇಚ್ಛಾಮರಣಿಗಳಾಗುವ ಬಯಕೆ ತಲೆದೋರುತ್ತದೆ."[೧೧] ಹರಿಹರನ ಬಸವರಾಜ ದೇವರ ರಗಳೆ, ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ (ಕನ್ನಡ ಅನುವಾದ ಡಾ॥ಪಿ.ವಿ.ನಾರಾಯಣ) ಭೀಮಕವಿಯ ಬಸವಪುರಾಣ, ಷಡಕ್ಷರದೇವನ ಬಸವರಾಜ ವಿಜಯ ಮುಂತಾದ ಕಾವ್ಯ ಕೃತಿಗಳು ಬಸವಣ್ಣನು ಸಂಗಮದಲ್ಲಿ ಲಿಂಗೈಕ್ಯನಾದನು ಎಂದುಸಾರುತ್ತದೆ. "ಕಾಯ-ಜೀವದ ಹೊಲಿಗೆಯನ್ನು ಬಿಟ್ಟು ಐಕ್ಯವಾಗುವುದು ಶಿವಯೋಗದ ರೀತಿ. ಇದೊಂದು ಯೋಗ ರಹಸ್ಯ ಇದನ್ನು ಪ್ರಭುದೇವರು ತಮ್ಮ ವಚನದಲ್ಲಿ

ದೇಹಭಾವ ವಳಿದಲ್ಲದೆ ಜೀವಭಾವವಳಿಯದು
ಜೀವಭಾವವಳಿದಲ್ಲದೆ ಭಕ್ತಿ ಭಾವವಳವಡದು
ಭಕ್ತಿ ಭಾವವಳವಟ್ಟಲ್ಲದೆ ಅರಿವು ತಲೆದೋರದು
ಅರಿವು ತಲೆದೋರಿದಲ್ಲದೆ ಕುರುಹು ನಷ್ಟವಾಗದು
ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು. ಇದು ಕಾರಣ;
ಕಾಯ ಜೀವದ ಹೋಲಿಗೆಯ ಅಳಿದ ಭೇದವ ತಿಳಿಯಬಲ್ಲಡೆ

ಗುಹೇಶ್ವರ ಲಿಂಗದ ಅರಿವು ಸಾಧ್ಯವಪ್ಪದು ಕಾಣಾ ಸಿದ್ಧರಾಮಯ್ಯ ಎಂದು ಹೇಳಿದ್ದಾರೆ. ಬಸವಣ್ಣ ಇಂತಹ ಸಿದ್ಧಿಯನ್ನು ಕರಗತ ಮಾಡಿಕೊಂಡಿದ್ದರು. ಇದೇ ಕ್ರಮವನ್ನನುಸರಿಸಿ ವಿಶ್ವಚೇತನದಲ್ಲಿ ಬಯಲಾದರು."[೧೨] ಬಸವಣ್ಣನು ಲಿಂಗೈಕ್ಯನಾದನು ಎಂಬ ವಾದವೊಂದೆಡೆಯಾದರೆ ಮತ್ತೊಂದೆಡೆ ಮಧುವರಸ ಮತ್ತು ಹರಳಯ್ಯರ ದಾರುಣ ಹತ್ಯೆಯಿಂದ ನೊಂದು ಕೋಪಗೊಂಡ ಬಸವಣ್ಣನು ಮಲ್ಲಿಬೊಮ್ಮರ ಮೂಲಕ ಬಿಜ್ಜಳನನ್ನು ಕೊಲೆಮಾಡಿಸಿದನು. ಇದಕ್ಕೆ ಪ್ರತಿಕಾರವಾಗಿ ಬಿಜ್ಜಳನ ಮಗ ಸೋವಿದೇವನು ಬಸವಣ್ಣನನ್ನು ಕೊಲ್ಲಿಸಿದನು ಎಂಬ ವಾದವೂ ಸಹ ಇದೆ.

---

೧೧. ಪ್ರೊ.ಬಿ.ವಿರೂಪಾಕ್ಷಪ್ಪ. ವಿಶ್ವಜ್ಯೋತಿ ಬಸವಣ್ಣನವರು. – ಪುಟ ೧೫೨
೧೨. ಪ್ರೊ.ಬಿ.ವಿರೂಪಾಕ್ಷಪ್ಪ. ವಿಶ್ವಜ್ಯೋತಿ ಬಸವಣ್ಣನವರು. – ಪುಟ ೧೫೪

# ಅಧ್ಯಾಯ-೪

## ಲೆದಂಡ ನಾಟಕದ ಮೂಲ ಅಕರ-
## ರಿಹರನ ಬಸವರಾಜದೇವರ ರಗಳೆ ;
## ಥಾ ಸಾರಾಂಶ

# ಅಧ್ಯಾಯ – ೪
# ತಲೆದಂಡ ನಾಟಕದ ಮೂಲ ಆಕರ
# 'ಹರಿಹರನ ಬಸವರಾಜದೇವರ ರಗಳೆ'– ಕಥಾ ಸಾರಾಂಶ

ದ.ರಾ.ಬೇಂದ್ರೆ ವಿರಚಿತ 'ತಲೆದಂಡ' ನಾಟಕದ ಮೂಲ ಆಕರ ೧೩ನೇ ಶತಮಾನದ ಕ್ರಾಂತಿಕವಿ ಹರಿಹರ ವಿರಚಿತ 'ಬಸವರಾಜದೇವರ ರಗಳೆ' ಬಸವಣ್ಣನವರ ಚರಿತ್ರ ಹಾಗೂ ಚಾರಿತ್ರ್ಯಕ್ಕೆ ಕಾರ್ಯಕಾರಣ ಸಂಬಂಧ ಜೋಡಿಸಿ ಅವರ ಘನ ವ್ಯಕ್ತಿತ್ವಕ್ಕೆ ರೂಪ ಕೊಟ್ಟವರು ಬೇಂದ್ರೆ. ಹೀಗಾಗಿ ಹರಿಹರಕವಿಯ ಕಾಲದ ಮಾನದಂಡಗಳಿಂದಲೇ ಬೇಂದ್ರೆಯವರ 'ತಲೆದಂಡ' ನಾಟಕದ ವಿಮರ್ಶೆಮಾಡುವುದು ಯುಕ್ತ. ಈ ನಿಟ್ಟಿನಲ್ಲಿ ಈ ಕೃತಿಯ ಕಥಾ ಸಾರವನ್ನೊಮ್ಮೆ ಗ್ರಹಿಸುವುದು ಅತ್ಯಗತ್ಯ.

ಕನ್ನಡ ಸಾಹಿತ್ಯದ ನೂತನ ಯುಗಪ್ರವರ್ತಕನೆಂದು ಕೀರ್ತಿತನಾಗಿರುವ ಹರಿಹರನು ಕನ್ನಡದಲ್ಲಿ ರಗಳೆ ಕಾವ್ಯಪ್ರಕಾರವನ್ನು ಜೀವಂತಗೊಳಿಸಿದ ಸುಪ್ರಸಿದ್ಧಕವಿ. ಮಾಯಿದೇವರೆಂಬ ಗುರುಗಳಲ್ಲಿ ವಿದ್ಯಾಭ್ಯಾಸಮಾಡಿ ಉದರಂಭರಣಕ್ಕಾಗಿ ದೋರಸಮುದ್ರದ ಹೊಯ್ಸಳರಾಜ ೨ನೇ ನರಸಿಂಹ ಬಲ್ಲಾಳನಲ್ಲಿ ಕರಣಿಕನಾಗಿದ್ದ. ಪಾರಮಾರ್ಥಿಕ ಒಲವಿನಿಂದಾಗಿ ಆ ವೃತ್ತಿಗೆ ಶರಣು ಹೊಡೆದನು. ಅನಂತರ ಹಂಪೆಗೆ ಮರಳಿ ಅಲ್ಲೇ ನೆಲೆಸಿದನು. ಹರಿಹರನು ಶಿವನೇ ತನ್ನ ಸರ್ವಸ್ವವೆಂದು, ಶಿವಶರಣರ ಸಂಕುಳವೇ ತನ್ನ ಬಳಗವೆಂದು, ಪುರಾತನರೇ ತನ್ನ ಪರಮಾರಾಧ್ಯರೆಂದು ನಂಬಿ, ನಚ್ಚಿ, ಪಂಪಾವಿರೂಪಾಕ್ಷನ ಸಾನಿಧ್ಯದಲ್ಲಿ ತನ್ನ ಜೀವನವನ್ನು ಸಾಗಿಸಿದಂತಹ ಪರಮ ಭಕ್ತಿಕವಿಯಾಗಿದ್ದನೆಂಬುದು ಆತನ ಕಾವ್ಯಗಳಿಂದ ವ್ಯಕ್ತವಾಗುತ್ತದೆ. ಈತ 'ಗಿರಿಜಾಕಲ್ಯಾಣ' ಎಂಬ ಪ್ರೌಢ ಚಂಪೂಕೃತಿಯನ್ನು ಹಾಗೂ 'ಪಂಪಾಶತಕ', 'ರಕ್ಷಾಶತಕ', 'ಮುಡಿಗೆಯ ಅಷ್ಟಕ' ಮತ್ತು 'ಶಿವಶರಣರ ರಗಳೆಗಳು' ಎಂಬ ಕಾವ್ಯಗಳನ್ನು ರಚಿಸಿದನು. ಹರಿಹರನ ಹೆಸರು ಕನ್ನಡ ಸಾರಸ್ವತ ಲೋಕದಲ್ಲಿ ಮಹತ್ವದ ಸ್ಥಾನಗಳಿಸಿರುವುದು ಆತನು ರಚಿಸಿರುವ ರಗಳೆಗಳಮೂಲಕ. 'ರಗಳೆ ಕವಿ' ಎಂದೇ ಪ್ರಸಿದ್ಧನಾದ ಈತ ಒಟ್ಟು ೧೦೬ ರಗಳೆಗಳನ್ನು ರಚಿಸಿದ್ದಾನೆಂದು ನಂಬಲಾಗಿದೆ. ಇಲ್ಲಿ ಆತ ಸಾಕ್ಷಾತ್ ಶಿವನೇ ಸಾಮಾನ್ಯರಲ್ಲಿ ಸಾಮಾನ್ಯರಾದ ಜನರಬಳಿಗೆ ಬಂದು ಹರಸುತ್ತಾನೆಂಬ ನಿಲವನ್ನು ತಳೆದಿದ್ದನು. ಭಕ್ತಿ ರಸಕ್ಕೆ ಸರಿಯಾದ ಛಂದೋರೂಪ ರಗಳೆಯನ್ನು ವೃದ್ಧಿ ಪಡಿಸಿದ ರ–ಳ ಕುಳಗಳನ್ನು ಬಿಟ್ಟ, ವಸ್ತುವಿನ ದೃಷ್ಟಿಯಿಂದ ಈತ ನಿಜಕ್ಕೂ ಕ್ರಾಂತಿಕಾರಿ ಕವಿಯೇ ಸರಿ. ಚಂಪುವಿನ ಚಕ್ರಬಂಧದಲ್ಲಿ ತೊಳಲುತ್ತಿದ್ದ ಕಾವ್ಯತತ್ವವನ್ನು ಬಿಡಿಸಿ ಅದು ಜನಸಾಮಾನ್ಯರಿಗೆ ನಿಲುಕುವಂತೆ ಮಾಡುವಲ್ಲಿ ಯಶಸ್ವಿಯಾದ ಶಿವಶರಣರ ವಚನಗಳ ಆನಂತರ ಸಲ್ಲುವ ಪ್ರಮುಖಸ್ಥಾನ ಹರಿಹರನ ರಗಳೆಗೇ ಸಲ್ಲಬೇಕು. ವಚನ ಸಾಹಿತ್ಯ ಮತ್ತು ಆ ಯುಗದ ಕವಿಗಳು ತುಳಿದ ಹಾದಿಯೇ ಭಿನ್ನವಾಗಿದ್ದು, ಜನಸಾಮಾನ್ಯರ ತುಡಿತ ಮಿಡಿತಗಳಿಗೆ ಧ್ವನಿಯಾದದ್ದನ್ನು ಕಾಣಬಹುದು. ಮಾತ್ರವಲ್ಲ ಆ ಮೂಲಕ ಸಾಮಾಜಿಕ ಹಾಗೂ ಧಾರ್ಮಿಕ ಬದುಕನ್ನು ಕುರಿತ ಹೆಚ್ಚು ಕೃಷಿ ಈ ಯುಗದಲ್ಲಾಯಿತು ಎಂದರೆ ಅತಿಶಯೋಕ್ತಿಯಾಗಲಾರದು.

ಶಿವಶರಣರಕಾಲಕ್ಕೆ ಹತ್ತಿರದವನಾಗಿ ಬದುಕಿದ ಹರಿಹರನು, ಶರಣರ ಚರಿತ್ರೆಗಳನ್ನು ನೇರಾನೇರವಾಗಿ ಕೇಳಿತಿಳಿದವನು. ಹೀಗಾಗಿ ಆತ ಶರಣರ ಚರಿತ್ರೆಗಳನ್ನು ರಚಿಸುವಾಗ ವಾಸ್ತವಿಕಅಂಶಗಳಕಡೆಗೆ ಹೆಚ್ಚು ಗಮನಕೊಟ್ಟಿದ್ದಾನೆ. ಅದೇ ವೇಳೆಗೆ ಕೆಲವು ಶರಣರ ಹುಟ್ಟನ್ನು ವಿವರಿಸುವಾಗ ಐತಿಹಾಸಿಕಪುರುಷರಿಗೂ ಕೈಲಾಸದ ಸ್ಪರ್ಶವಿರಿಸಿದ್ದಾನೆ. ಹನ್ನೆರಡನೆ ಶತಮಾನದ ಸಾಮಾಜಿಕ, ಧಾರ್ಮಿಕ ಸುಧಾರಣಾ ಚಳುವಳಿಯ ನೇತಾರ, ಪ್ರಸಿದ್ಧ ವಚನಕಾರ ಬಸವಣ್ಣನನ್ನು ಕುರಿತಾದ ಈತನ 'ಬಸವರಾಜದೇವರ ರಗಳೆ'ಯು ಕೂಡ ಇದಕ್ಕೆ ಹೊರತಲ್ಲ.

ರಗಳೆಯು ಶಿವನ ಒಡ್ಡೋಲಗದ ದೃಶ್ಯದೊಂದಿಗೆ ಆರಂಭಗೊಳ್ಳುತ್ತದೆ. ಅಲ್ಲಿ ಒಲಿದು ಸಿಂಗರಿಸಿ ಕುಳಿತಿದ್ದ ರುದ್ರ ಕನ್ನಿಕೆಯರ ದೃಶ್ಯ, ಉದ್ದಂಡ ವೀರಭದ್ರರೂ, ಎಡ-ಬಲಗಳಲ್ಲಿ ವಿನಾಯಕ ಹಾಗೂ ಕುಮಾರಸ್ವಾಮಿಯೂ ಇರುತ್ತಾರೆ. ಅಲ್ಲಿ ಆಸೀನರಾಗಿ ಮೆರೆಯುತ್ತಿದ್ದವರ ಸಾಲುಗಳಿಗೆ ಲೆಕ್ಕವೇಇಲ್ಲವೆನ್ನುವಂತೆ 'ಮನುಗಳುಂ ಮುನಿಗಳುಂ ಸಿದ್ಧವಿದ್ಯಾದಿಗಳು ಮನುಪಮನ ಕೆಲಬಂದೊಳೊಪ್ಪಿತ್ತೋರುತ್ತಿರಲಾ' ಎಂದು ಕವಿ ವರ್ಣಿಸುತ್ತಾನೆ. ಈ ಸಮಯದಲ್ಲಿ ಶಿವನ ಒಡ್ಡೋಲಗದಲ್ಲಿ ಒಬ್ಬ ಮಾಲೆಗಾರನು 'ಕಂಪುಳ್ಳ ಸಂಪಗೆಯ ಪೂಗಳಂ ತಿಮಿತಂದು' ಪರಮೇಶ್ವರನ ಸಿರಿ ಮುಡಿಗಾಗಿ ಅರ್ಪಿಸಿದನು. ಸುಪ್ರೀತನಾದ ಶಿವನು ತನ್ನ ಮುಂದೆ ನಿಂತಿದ್ದ ವೃಷಭನನ್ನು ಕರೆದು, "ಇದನ್ನು ಇಲ್ಲಿರುವವರೆಲ್ಲರಿಗೂ ವಿನಿಯೋಗಿಸು" ಎಂದು ಆಜ್ಞಾಪಿಸಿದನು. ಆಗ ವೃಷಭನು 'ಪರವಶೀಭೂತನಾಗುತ್ತೆ ಮರಹಂ ಹೊತ್ತು' ಗಿರಿಜೆಗೂ, ಗಣಪತಿಗೂ, ಹರಿಬ್ರಹ್ಮಾದಿಗಳೂ, ಮನುಷ್ಯಜನ, ಮುನಿಜನರಿಗೂ, ಗಣನಿವಹಕ್ಕೂ ಕೊಟ್ಟು, ಕುಮಾರ ಸ್ವಾಮಿಗೆ ಕೊಡುವುದನ್ನು ಮರೆತುಬಿಟ್ಟನು, ಎಲ್ಲರಿಗೂ ಕೊಟ್ಟಾಯಿತೆಂದು ಬಿನ್ನೈಸಿದನು. ಈ ವಿಷಯವಾಗಿ ಕುಮಾರಸ್ವಾಮಿಯು ತನಗೆ ಹೂ ಸಿಗಲಿಲ್ಲವೆಂದೂ, ವೃಷಭಮುಖನು ಕೊಟ್ಟೆನೆಂದೂ ಸಾಧಿಸಿದನು. ಆಗ ಪರಮೇಶ್ವರನು ವೃಷಭಮುಖನನ್ನು ಕುರಿತು "ಎಮಗೆ ಕುಡದಿರ್ದಡಂ ಸೈರಿಸುವೆವಾವಯ್ಯ. ವಿಮಳ ಶಿಶುವಿಂಗೆ ಹುಸಿನುಡಿಯೆ ಸೈರಿಸುವೆಯ್ಯ ಆದುದರಿಂದ ಧರಣಿಯಲ್ಲಿ ಹುಟ್ಟು" ಎಂದು ಹೇಳಿದನು. ನಂತರ ತಲ್ಲಣಗೊಂಡಂತಹ ವೃಷಭಮುಖನನ್ನು ಸಮಾಧಾನಪಡಿಸುತ್ತಾ "ಚಿಂತಿಸಬೇಡ ಭೂಲೋಕದಲ್ಲಿ ವೃಷಭ ನಾಮದೊಂದಿಗೆ ಹುಟ್ಟಿ ಅಲ್ಲಿ ಶಿವಭಕ್ತ ಜಂಗಮರಿಗೆ ದಾನ ಸನ್ಮಾನಗಳನ್ನೆಸಗಿ ಆದ ತಪ್ಪಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊ ಆ ಬಳಿಕ ನಾನು ಕೃಪೆ ದೋರಿ ನಿನ್ನನ್ನು ಕೈಲಾಸಕ್ಕೆ ಹಿಂದಕ್ಕೆ ಕರೆಸಿಕೊಳ್ಳುವೆನು" ಎಂದು ಸಮಾಧಾನಪಡಿಸಿಸುತ್ತಾನೆ.

"ಈ ರೀತಿಯಾಗಿ ಭೂಮಿಗೆ ಬರುವ ವೃಷಭನು ಬಾಗೇವಾಡಿಯ ಅಗ್ರಹಾರದಲ್ಲಿದ್ದ ಕಮ್ಮೆಕುಲದ ಮಾದಿರಾಜ ಹಾಗೂ ಮಾದಾಂಬೆಯರಿಗೆ ಮಗನಾಗಿ ಶಿವನ ಅನುಜ್ಞೆಯಂತೆ ಜನ್ಮ ತಾಳಿದನು. ಆ ಶಿವಭಕ್ತದಂಪತಿಗಳು ಕಾರಣಿಕ ಮಗುವಿಗೆ ಜಾತಕರ್ಮಗಳನ್ನು ನೆರವೇರಿಸಿ 'ಬಸವ' ಎಂದು ಹೆಸರಿಟ್ಟರು."[೧] ಬಸವಣ್ಣನು ತನ್ನ ಕರ್ಮಜೀವನದಿಂದ

---

೧. ಎಂ. ಆರ್. ಶ್ರೀನಿವಾಸಮೂರ್ತಿ. ಭಕ್ತಿ ಭಾಂಡಾರಿ ಬಸವಣ್ಣನವರು.ಪುಟ.೫೬

ಮುಕ್ತನಾಗುವಮನದಿಂದ ಜನಿವಾರವನ್ನು ಕಿತ್ತೆಸೆದು ಬಾಗೇವಾಡಿಯನ್ನು ಬಿಟ್ಟು, ಮಲಪ್ರಹರಿ ಹಾಗೂ ಕೃಷ್ಣವೇಣಿ ನದಿಗಳ ಸಂಗಮದಲ್ಲಿದ್ದ ಕಪ್ಪಡಿ ಸಂಗಮವನ್ನು ತಲುಪಿ ಅಲ್ಲಿದ್ದ ಶಿವಾಲಯಕ್ಕೆ ಪೊಕ್ಕು ತನ್ನ ಪೂರ್ವ ಸ್ಮರಣೆಯುಂಟಾಗಿ ಧ್ಯಾನಕ್ಕೆಕುಳಿತನು. ಅಲ್ಲಿಗೆ ಸ್ಥಾನಪತಿಗಳಾದ ಈಶಾನ್ಯ ಗುರುಗಳು ಬಂದು ಧ್ಯಾನಾಸಕ್ತ ಬಸವಣ್ಣನನ್ನು ಕಂಡು ಕೂಡಲ ಸಂಗಮೇಶ್ವರನ ಸೇವಾಕಾರ್ಯದಲ್ಲಿ ನಿರತನಾಗಿರುವುದಕ್ಕೆ ಅನುವು ಮಾಡಿಕೊಟ್ಟರು.

ಹೀಗಿರುವಲ್ಲಿ ಒಂದು ದಿನ ರಾತ್ರಿ ಬಸವನು ರಂಗಮಂಟಪದಲ್ಲಿ ಸಂಗಮಧ್ಯಾನ ನಿದ್ರಾಮುದ್ರೆಯೊಳಿರಲು ಕನಸಿನಲ್ಲಿ ಪಂಚಮುಖ, ದಶಭುಜಗಳನ್ನು ತಳೆದು ಪರಮೇಶ್ವರನು ಕಾಣಿಸಿಕೊಂಡು. 'ಎಲೆಮಗನೆ, ಬಸವ, ಬಸವಣ್ಣ, ಬಸವಿದೇವ ನಿನ್ನಂ ಮಹೀತಳದೊಳು ಮೆರೆದಪೆವು ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು' ಎಂದು ಹೇಳುತ್ತಾರೆ.

ಶಿವನ ಈ ಆಜ್ಞೆಯಿಂದ ವಿಚಲಿತನಾದ ಬಸವಣ್ಣನು ಅದನ್ನು ಒಪ್ಪದೆ ಅಪಾರವಾದ ನೋವನ್ನುಂಡನು. ಆತನನ್ನು ಸಮಾಧಾನಪಡಿಸಿದ ಶಿವನು 'ಮಂಗಳವಾಡಕ್ಕೆ ಹೋಗಿ ಬಿಜ್ಜಳನಿಂದ ವಂದಿಸಿಕೊಳ್ಳುವುದು, ಜಂಗಮದಾಸೋಹವನ್ನು ಮಾಡುವುದು..... ಅಂಜಬೇಡ, ನಿನ್ನೊಡನೆ ಬೆಂಬಿಡದೆ ಸಲಹಲು ನಾನಿರುತ್ತೇನೆ' ಎಂದು ಸಮಾಧಾನ ಪಡಿಸುತ್ತಾನೆ.

ಗಣಕ ವೇಷಧಾರಿಯಾದ ಬಸವಣ್ಣನು ಮಂಗಳವಾಡೆಯನ್ನು ಪ್ರವೇಶಿಸಿ, ಬಿಜ್ಜಳರಾಯನ ಅರಮನೆಯ ಕರಣಸಾಲೆಯನ್ನು ಹೊಕ್ಕು ಅಲ್ಲಿ ನಡೆಯುತ್ತಿರುವ ಕಾರ್ಯ ಕಲಾಪವನ್ನು ನೋಡುತ್ತಿರಲು ಭಂಡಾರಿಯಾದ ಸಿದ್ಧರಸ ದಂಡಾಧಿಪತಿಯು ಅಲ್ಲಿಗೆ ಬರುತ್ತಾನೆ. ಆತನು ಗಣಕರಲ್ಲಿ ಭಂಡಾರದ ಲೆಕ್ಕಗಳನ್ನು ವಿಚಾರಿಸುತ್ತಿರಲು ಅವರು ಲೆಕ್ಕ ತಪ್ಪಾಗಿ ಹೇಳಿದಾಗ. ಬಸವನು ಅದನ್ನು ತಿದ್ದಿ, ತಪ್ಪನ್ನು ತೋರಿಸಿಕೊಡುತ್ತಾನೆ. ಆಶ್ಚರ್ಯಚಕಿತನಾದ ಸಿದ್ಧರಸನು ಬಸವಣ್ಣನನ್ನು ಬಿಜ್ಜಳನಲ್ಲಿಗೆ ಕರೆದೊಯ್ದು, ಆತನ ಬುದ್ದಿ ಶಕ್ತಿಯನ್ನು ಕೊಂಡಾಡಿ ಭಂಡಾರದಲ್ಲಿ ಉದ್ಯೋಗವನ್ನು ದಕ್ಕಿಸಿ ಕೊಟ್ಟನು.

ಬಸವಣ್ಣನು ತನ್ನ ಕಾಯಕ ನಿಷ್ಠೆ ಹಾಗೂ ಸಾಮಾಜಿಕ ಧಾರ್ಮಿಕ ಸುಧಾರಣೆಗಳಿಂದ ಕಲ್ಯಾಣದ ಕೇಂದ್ರಬಿಂದುವಾಗುತ್ತಾನೆ. ಮೇಲಾಗಿ ಬಸವಣ್ಣನು ಭಂಡಾರಿಯಾಗಿ ನಿಯುಕ್ತ ಗೊಂಡು ಸತ್ಕುಲಸಾದೃಶ್ಯ, ಸುಶೀಲೆಯರಾದ ಗಂಗಾದೇವಿ, ಮಾಯಿದೇವಿಯರೊಂದಿಗೆ ವಿವಾಹವಾಗುತ್ತದೆ.

ಬಿಜ್ಜಳನ ಆಸ್ಥಾನದಲ್ಲಿದ್ದ ನಾರಾಯಣ ಭಟ್ಟ, ಮಂಚಣ್ಣ ಮೊದಲಾದ ಬ್ರಾಹ್ಮಣರು ಬಸವಣ್ಣನ ಏಳ್ಗೆಯನ್ನು ಸೈರಿಸದೆ ಅಸೂಯೆಪಡುತ್ತಾ ಆತನಿಗೆ ಏನಾದರೂ ಪ್ರತೀಕಾರ ಮಾಡಬೇಕೆಂದು ಆಲೋಚಿಸುತ್ತಿರಲು, ಒಂದು ದಿನ ಸಭೆಗೆ ಮಾಲೆಗಾರನೊಬ್ಬನು

ಬಂದು ಬಿಜ್ಜಳರಾಯನಿಗೆ 'ಕೇತಕೀಪುಷ್ಪ'ವನ್ನು ಕಾಣಿಕೆಯಾಗಿ ಸಮರ್ಪಿಸುವುದನ್ನು ಕಾಣಬಹುದು. ಅದರ ಅಪೂರ್ವ ಕಂಪನ್ನು ಮೆಚ್ಚಿಕೊಂಡ ಬಿಜ್ಜಳನು ಅದರಲ್ಲಿಯ ಒಂದು ನುಣ್ಣೆಸಳನ್ನು ತೆಗೆದು ಬಸವಣ್ಣನ ಕೈಗೆ ಕೊಡಲು, ಆತ ಅದನ್ನು 'ಶಿವಾರ್ಪಣಂ' ಎಂದು ಸಂಗಮೇಶ್ವರಲಿಂಗಕ್ಕೆ ಅರ್ಪಿಸುತ್ತಾನೆ. ಬಸವಣ್ಣನ ಏಳಿಗೆಯನ್ನುಸಹಿಸದಿದ್ದ ನಾರಾಯಣಭಟ್ಟನು ಅಸೂಯೆಯಿಂದ, ಕೇತಕೀಪುಷ್ಪವನ್ನು ಭೂತೇಶ್ವರನಿಗೆ ಅರ್ಪಿಸಲಾಗದೆಂದು ಶಿವಾಗಮಗಳು ಸಾರುತ್ತಿರುವಲ್ಲಿ, ಬಸವಣ್ಣನು ಅದನ್ನು ಮೀರಿ ನಡೆದಿರುವನೆಂದು ಆಕ್ಷೇಪಿಸುತ್ತಾನೆ. ಅದಕ್ಕೆ ಬಸವಣ್ಣನು ನಗುತ್ತ "ಎಲೆ ವಿಪ್ರ, ಕರ್ಮಜಡನೆ, ದೇವಂ ಭಕ್ತರು ಕೊಟ್ಟಡೆ ಕೈಕೊಳ್ವ"ನೆಂದು ಹೇಳುವನು. ಬಿಜ್ಜಳನು ಅದಕ್ಕೆ ಕುರುಹು ಕೇಳಿದಾಗ ಬಸವಣ್ಣನು ಅಕ್ಕಪಕ್ಕಗಳಲ್ಲಿದ್ದ ಸಹಸ್ರ ಮಾಹೇಶ್ವರರ ಕಕ್ಷ ಪುಟದ ಸೆಜ್ಜೆಗಳಲ್ಲಿಯೂ ಮಂಗಳವಾಡದ ಶಿವಾಲಯಗಳ ಲಿಂಗಗಳ ತಲೆಗಳ ಮೇಲೂ ಕೇತಕಿಯೆಸಳು ಇರುವುದನ್ನು ತೋರಿಸಿ ಪವಾಡ ಮೆರೆಯುತ್ತಾನೆ. ಬಸವಣ್ಣನ ಆ ಮಹಿಮೆಗೆ ಬಿಜ್ಜಳನಾದಿಯಾಗಿ ಎಲ್ಲರೂ ತಲೆಬಾಗುತ್ತಾರೆ. ಸ್ವತಃ ಬಿಜ್ಜಳರಾಯನಂತೂ ಬಸವಣ್ಣನು ಸಾಕ್ಷಾತ್ ಸಂಗಮೇಶ್ವರನೆಂದೇ ಬಗೆದು ಅವನ ಪಾದಕ್ಕೆರಗುವುದನ್ನು ಕಾಣಬಹುದು.

ಇಷ್ಟರಲ್ಲಾಗಲೇ ಬಸವಣ್ಣನ ಕೀರ್ತಿ ಎಲ್ಲೆಡೆಗೆ ಹರಡಿ ಆತನ ದರುಶನ ಪಡೆಯಲು ಎಲ್ಲೆಲ್ಲಿಂದಲೂ ಶಿವಶರಣರು ಮಂಗಳವಾಡೆಗೆ ತಂಡತಂಡವಾಗಿ ಬರತೊಡಗುತ್ತಾರೆ. ಹೀಗೆ ಬಂದವರ ಊಟೋಪಚಾರಗಳಿಗೆ ಬಸವಣ್ಣನ ಮಹಾಮನೆಯ ದ್ವಾರವು ಸದಾ ಸ್ವಾಗತಿಸಲು ತೆರೆದೇಇದ್ದಿತು. ಜಂಗಮರ ಆರೋಗಣೆಗೆ ಮೃಷ್ಟಾನ್ನ, ತೊಡಲು ದಿವ್ಯ ವಸ್ತ್ರಗಳು, ಧರಿಸಲು ರತ್ನ ಖಚಿತ ಆಭರಣಗಳನ್ನು ಕೊಡಲಾಗುತ್ತಿತ್ತು. ಹೀಗಿರುವಾಗ ನಾರಣಕ್ರಮಿತ, ಸೌರಿಭಟ್ಟ, ವಿಷ್ಣುಪೆದ್ದಿ ಮೊದಲಾದ ವೈಷ್ಣವರು ಬಿಜ್ಜಳನಲ್ಲಿಗೆ ಬಂದು "ಎಲೆ ಮರುಳರಸ, ಬಸವಂಗೆಮರುಳಾದೆ, ರಾಜ್ಯದಳರಂ ಭಕ್ತರ್ಗೆ ಬರಿದಾಯ್ತು, ಭಂಡಾರಂ ಸೂರೆವೋವುದು" ಎಂದು ಚಾಡಿಚುಚ್ಚುತ್ತಾರೆ. ಬಿಜ್ಜಳನಿಗೂ ಈ ದೂರುಗಳನ್ನು ಕೇಳಿಯಾದ ಬಳಿಕ ಅನುಮಾನಗೊಂಡು ಬಸವಣ್ಣನನ್ನು ಕರೆಸಿ "ನಿಮ್ಮಂ ನಂಬಿ ಭಂಡಾರಮಂ ಕೊಟ್ಟುಡೆನ್ನನಿಂತು ಕೆಡಿಸುವರೆ? ರಾಜ್ಯಮಂ ನೀರೊಳದ್ದುವರೆ? ನಿಂದ ಹೊನ್ನಿಂಗೆ ನಿರ್ಣಯಂ ಕೊಡುವುದು" ಎಂದು ಆಜ್ಞಾಪಿಸಿದಾಗ. ಕೂಡಲೇ ಬಸವಣ್ಣನು ಬಿಜ್ಜಳನೊಂದಿಗೆ ಸಕಲರ ಸಮಕ್ಷಮ ಭಂಡಾರಕ್ಕೆ ನಡೆದು ಮುದ್ರಿಸಿದ ಪೆಟ್ಟಿಗೆಗಳನ್ನು ತೆಗೆಸಿ, ಕರಣಿಕರಿಂದ ಲೆಕ್ಕ ಮಾಡಿಸಲು ಅದು ಇರಬೇಕಾಗಿದ್ದ ಹದಿನೆಂಟು ಕೋಟಿಗಿಂತಲೂ ಹತ್ತರಷ್ಟಾದಾಗ ಗಣಕರು ಲೆಕ್ಕ ಮಾಡಲಾಗದೆ ಬೆರಗಾಗುವುದು, ಬಿಜ್ಜಳನು ನಾಚಿಕೆಯಿಂದ ತಲೆಬಾಗಿಸಿ ಬಸವಣ್ಣನಲ್ಲಿ ಕ್ಷಮೆಕೋರಿ ಹನ್ನೆರಡು ಸಾವಿರಲಕ್ಷ ವಸ್ತುವನ್ನು ತಪ್ಪು ಕಾಣಿಕೆಯಾಗಿ ಕೊಟ್ಟದ್ದು ಗಮನಾರ್ಹ ಸಂಗತಿಯಾಗುತ್ತದೆ.

ಹೀಗೆ ಬಸವಣ್ಣನು ತನ್ನ ಸಾಮರ್ಥ್ಯವನ್ನು ಮೆರೆಯುತ್ತಿರಲು ಚೋಳ, ಪಾಂಡ್ಯ, ಕೇರಳ, ಗೌಳ, ವಂಗ, ಬಂಗಾಳ ಮೊದಲಾದ ನಾನಾದೇಶಗಳಿಂದ ಶರಣರು ಬಂದು ಬಸವಣ್ಣನಿಂದ ಆದರಾತಿಥ್ಯಗಳನ್ನು ಪಡೆಯುತ್ತಿದ್ದರು. ಈ ಮಧ್ಯದಲ್ಲಿ ಕೆಲವು ಕುಹಕಿಗಳು ಜಂಗಮವೇಷಧಾರಿಗಳಾಗಿ ಲಿಂಗಕ್ಕೆಬದಲು ಬದನೆಕಾಯಿಗಳನ್ನು ಕಟ್ಟಿಕೊಂಡು ಮಹಾಮನೆಗೆ ಬರುತ್ತಾರೆ. ವಿಶೇಷವೆಂದರೆ ಪೂಜಾಸಮಯದಲ್ಲಿ ಅವುಗಳು ಲಿಂಗವಾಗಿರುತ್ತವೆ. ಭವಿಗಳಲ್ಲಿ ಭಕ್ತಿಯು ಉಮ್ಮಳಿಸುತ್ತದೆ. ಅಂದಿನಿಂದ ಬಸವಣ್ಣನು ಬದನೆಕಾಯಿಯನ್ನು ಉಪಯೋಗಿಸುವುದನ್ನೇ ಬಿಡುತ್ತಾನೆ.

ಮತ್ತೊಮ್ಮೆ ಬಸವಣ್ಣನು ಶಿವಶರಣರ ಗೋಷ್ಠಿಯಲ್ಲಿ ಇರುವಾಗ ಮಹಾಮನೆಯ ಗೋವಳನು ಬಂದು ಕಳ್ಳರು ಜಂಗಮ ವೇಷಧರಿಸಿ ಬಂದು ಗೋವುಗಳನ್ನು ಹೊಡೆದುಕೊಂಡು ಹೋಗಿದ್ದಾರೆಂಬ ಸುದ್ದಿತುರುತ್ತಾನೆ. ಲಿಂಗ-ಜಂಗಮ ಒಂದೇ ಎಂಬ ಭಾವನೆಯುಳ್ಳ ಬಸವಣ್ಣನು ಹಸುಗಳ ಹಿಂದೆ ಕರುಗಳನ್ನು ಹೊಡೆದು ಕಳುಹುವಂತೆ ಆಜ್ಞಾಪಿಸುತ್ತಾನೆ.

ಮತ್ತೊಂದುದಿನ ಬಸವಣ್ಣನು ಶಿವಯೋಗಾನಿದ್ರಾಮುದ್ರಿತನಾಗಿ ಪವಡಿಸಿರಲು ಆತನನ್ನು ಕಾಣಲು ಬಂದ ಶರಣರಿಗೆ ದ್ವಾರಪಾಲಕನು, ಈಗ ಸಮಯವಲ್ಲ, ನಿದ್ರೆಯೊಳಗಿದ್ದಾರೆ ಎಂದು ಹೇಳಿ ಅವರನ್ನು ಹಿಂದಿರುಗಿಸಿಬಿಡುತ್ತಾನೆ. ಆ ಜಂಗಮರು ತಿರುಗುತ್ತಲು ಅವರೊಡನೆಯೆ ಬಸವನ ಪ್ರಾಣವೂ ಹೋಗಿ ಬಿಡುತ್ತದೆ. ಬಳಿಕ ಬಸವಣ್ಣನ ಸತಿಯರು ಬಂದು ಎಚ್ಚರಿಸಿದರೆ ಆತನು ಏಳುವುದಿಲ್ಲ. 'ಸಂಗನೊಳಗೆ ಸಂದಂ ಬಸವ' ಎಂದು ಭಕ್ತರೆಲ್ಲ ತೀರ್ಮಾನಿಸಿ ಕೋಲಾಹಲವೆಬ್ಬಿಸುತ್ತಾರೆ.

ಮಹೇಶ್ವರರು ಸೇರಿ ನಡೆದುದೇನೆಂದು ಅರಿತೊಡನೆ ಹಿಂದಿರುಗಿದ ಶಿವಶರಣರನ್ನು ಕರೆತರುವ ಏರ್ಪಾಟಾಗುವುದು. ಆ ಭಕ್ತರನ್ನು ಹುಡುಕಿ ಕರೆತಂದಾಗ "ಭಕ್ತರೊಡನೆ ಹೋಗಿದ್ದ ಬಸವಣ್ಣನು ಬರುವುದನ್ನು ಕಾಣುತ್ತೇವೆ". ಹೀಗೆ ಬಸವಣ್ಣನು ತಾನು ಜಂಗಮ ಪ್ರಾಣಿಯೆಂಬುದನ್ನು ತೋರಿಸುವುದನ್ನು ಇಲ್ಲಿ ಕಾಣಬಹುದು.

ಒಂದು ದಿನ ಬಸವನು ಹಿರಿಯ ಮಾಹೇಶ್ವರರ ಕೇರಿಗಳಲ್ಲಿ ಬರುತ್ತಿದ್ದಾಗ 'ಓಹಿಲಯ್ಯಂಗೆ ಹಿತಾರ್ಥ, ಉದ್ಭಟಯಂಗೆ ಹಿತಾರ್ಥ, ಬಸವರಾಜಂಗೆ ಹಿತಾರ್ಥ, ಆರೋಗಿಸು' ಎಂಬ ಮಾತುಗಳು ಕಿವಿಗೆ ಬೀಳಲು ಪರಮ ಮಾಹೇಶ್ವರನಾದ ಕಂಬಳಿ ನಾಗಿದೇವನ ಮನೆಯನ್ನು ಹೊಕ್ಕು, ಲಿಂಗಕ್ಕೆ ಆರೋಗಣೆಯನ್ನು ಅರ್ಪಿಸುವ ಆತನ ಸಂಭ್ರಮಕ್ಕೆ ಆನಂದಿಸಿ ಪ್ರಸಾದವನ್ನು ಸೇವಿಸುತ್ತಾನೆ. ಈ ವಿಷಯ ನಾರಾಯಣ ಕ್ರಮಿತನಿಗೆ ತಿಳಿದು ಆ ಮೂಲಕ ರಾಜನಿಗೆ ಕಿವಿಯೂದುತ್ತಾನೆ. ಬಿಜ್ಜಳನು ಬಸವಣ್ಣನನ್ನು ಕರೆಸಿ ಈ ರೀತಿ ಹೊಲೆಯನನ್ನು ಶ್ರೇಷ್ಠನೆಂದು ಕರೆದು ಮನೆಗೆ ಹೋಗಿ ಆಹಾರ ಸೇವಿಸುವುದು ತಪ್ಪು,

ಹೊಲೆಯನು ಶಿವಭಕ್ತನಾದರೆ ಅವನ ದೇಹದಿಂದ ಹಾಲು ಸುರಿಯುವುದೇ ಎಂದು ವ್ಯಂಗ್ಯವಾಡುತ್ತಾನೆ. ಆ ಕೂಡಲೇ ಬಸವಣ್ಣನು, ಕಂಬಳಿನಾಗಿದೇವನ ಬೆರಳಿನಿಂದ ಹಾಲು ಸುರಿಯುವ ಪವಾಡ ತೋರುತ್ತಾನೆ.

ಬಸವಣ್ಣನ ಕೀರ್ತಿಯನ್ನು ಕೇಳಿ ಕಿನ್ನರಿ ಬ್ರಹ್ಮನೆಂಬ ಶರಣನು ಮಂಗಳವಾಡೆಗೆ ಬಂದು ಬಸವಣ್ಣನ ಮನೆಯಲ್ಲಿ ಆತಿಥ್ಯ ಪಡೆಯುತ್ತಾನೆ. ಒಂದು ದಿನ ಅವನು ತನಗೆ ಪ್ರಿಯವಾದ ಈರುಳ್ಳಿಯನ್ನುತರಿಸಿ ಶೋಧಿಸುತ್ತಿರುವಾಗ ಈ ಸಂಗತಿಯನ್ನರಿಯದ ಬಸವಣ್ಣನು ಉಳ್ಳಿಯ ಘಾಟು ಕಂಪಿಗೆ ಮೂಗುಮುರಿದು ಈ "ಅಬೋಜ್ಯವಸ್ತುವನ್ನು ಮನೆಗೆ ತಂದವನಾವನು?" ಎಂದು ಅರಮನೆಯತ್ತ ಹೆಜ್ಜೆ ಹಾಕುತ್ತಾನೆ. ಬಸವಣ್ಣನ ಆಕ್ಷೇಪಣೆಯನ್ನು ಆಲಿಸಿದ್ದ ಬೊಮ್ಮಯ್ಯನು ಅಲ್ಲಿಂದ ಹೊರಟು ಹೋಗುತ್ತಾನೆ. ಆನಂತರ ಇದನ್ನೆಲ್ಲಾ ಕೇಳಿ ತಿಳಿದ ಬಸವಣ್ಣನು ತಿಳಿಯದೆ ಮಾಡಿದ ತಪ್ಪಿಗಾಗಿ ಪ್ರಾಯಶ್ಚಿತ್ತ ಹೊಂದಲು ಸ್ವತಃ ತಾನೇ ಈರುಳ್ಳಿಯಿಂದ ಅಲಂಕರಿಸಿಕೊಂಡು ಮಂಗಳವಾದ್ಯಸಮೇತ ಕಿನ್ನರಿ ಬ್ರಹ್ಮನಲ್ಲಿಗೆ ಧಾವಿಸಿಬಂದು ಕ್ಷಮೆಕೋರಿ ತನ್ನತನದ ಶ್ರೇಷ್ಠತೆಯನ್ನು ಮೆರೆಯುತ್ತಾನೆ.

ಕಳಿಂಗದೇಶದ ಮಹದೇವಿ ಸೆಟ್ಟಿಯೆಂಬುವವನು ಬಸವಣ್ಣನ "ಬೇಡಿ ಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲಸಂಗ ಅವಧಾರು" ಎಂಬ ವಚನದ ಚರಣವನ್ನು ಕೇಳಿರುತ್ತಾನೆ. (ದ.ರಾ.ಬೇಂದ್ರೆಯವರು ತಮ್ಮ ನಾಟಕದ ಶೀರ್ಷಿಕೆಯಾದ 'ತಲೆದಂಡ' ಎಂಬ ಪದವನ್ನು ಈ ಚರಣದಿಂದ ಆರಿಸಿಕೊಂಡಿದ್ದಾರೆ) ಅದನು ಪರೀಕ್ಷಿಸಲು ಹತ್ತು ಎತ್ತಿನ ಮಾಣಿಕ, ಹತ್ತು ಎತ್ತಿನ ಮುತ್ತು, ಹತ್ತು ಎತ್ತಿನ ಹೊಸ ಹೊನ್ನುಗಳ ಬೇಡಿ ನೋಡುವೆನೆಂದು ಮಂಗಳವಾಡಕ್ಕೆ ಹೊರಡುತ್ತಾನೆ. ಬಸವಣ್ಣನನ್ನು ಭೇಟಿಯಾಗಿ ಬಾಯಿ ತೊದಲಿ, ಗದ್ಗದಿಸಿ ಚಿನ್ನ, ಮುತ್ತುಗಳ ಬದಲಾಗಿ ತೊಗರಿ, ಜೋಳ, ಅಕ್ಕಿ ಕಡಲೆಯನ್ನು ಕೇಳುತ್ತಾನೆ. ಆದರೆ ಬಸವಣ್ಣನು ಮಹದೇವಿ ಸೆಟ್ಟಿಯು ಈ ಹಿಂದೆ ಬೇಡಲು ಬಯಸಿದ್ದ ಹೊನ್ನು, ಮುತ್ತುಗಳನ್ನು ನೀಡಿ ಕಳುಹಿಸುತ್ತಾನೆ.

ಇವೆಲ್ಲವು ಭಕ್ತರ, ಶಿವಶರಣರ, ರಾಜನ, ಆಗದವರ ಪರೀಕ್ಷೆಗಳಾಗುತ್ತವೆ. ಆದರೆ ಒಮ್ಮೆ ಸಾಕ್ಷಾತ್ ಶಿವನೇ ಹದಿನಾರರ ಹರೆಯದ ರಸಿಕ ಭಕ್ತನ ವೇಷದಲ್ಲಿ ಬಂದು ಬಸವಣ್ಣನ ಉಪಚಾರ, ಸತ್ಕಾರಗಳನ್ನು ಸ್ವೀಕರಿಸಿ ಬಳಿಕ "ಬಸವ, ಬಸವಾ ನಾವು ಹೆಂಗೂಸಿಲ್ಲದೆ ಇರ್ದುದಿಲ್ಲ" ಎನ್ನುತ್ತಾನೆ, ಅತಿಥಿದೇವೋಭವ ಎಂಬ ನೀತಿಯಂತೆ ಬಸವಣ್ಣನು, ಚಾರರನ್ನು ಕರೆದು ಪುರದೊಳಗಿಂದ ಪುಣ್ಯಾಂಗನೆಯರನ್ನು ಕರೆತರಲು ಕಳುಹಿಸುತ್ತಾನೆ. ಆದರೆ ಹಿಂದುರುಗಿದ ಆತ ಪುರದ ಪುಣ್ಯಾಂಗನೆಯರೆಲ್ಲರೂ ದಂಪತಿಗಳಾಗಿದ್ದಾರೆ ಎನ್ನುತ್ತಾನೆ.

ಇದೆಲ್ಲವು ಶಿವನ ಪರೀಕ್ಷೆ ಎಂದುಕೊಂಡ ಬಸವಣ್ಣನು ತನ್ನ ಪತ್ನಿ ಮಾಯಿದೇವಿಯ ಮನವೊಲಿಸಿ ತರುಣನ ಕೊಠಡಿಗೆ ಕಳುಹಿಸುತ್ತಾನೆ. ಅಲ್ಲಿ ಮಲಗಿದ್ದ ತರುಣನು ಸಾಕ್ಷಾತ್ ಪರಶಿವನೇ ಆಗಿದ್ದುದನ್ನು ಕಂಡು ದಂಪತಿಗಳು ಭಕ್ತಿಭಾವ ಪರವಶರಾಗುವುದನ್ನು ಕಾಣುತ್ತೇವೆ.

ಇದಾದ ಬಳಿಕ ಒಮ್ಮೆ ಅಲ್ಲಮಪ್ರಭುವು ಅಲ್ಲಿಗೆ ಬಂದು ಬಸವಣ್ಣನಿಗೆ ಶಿವಲಿಂಗದ ಅನುವಂ ತೋರಿ ಕದಳೀವನಕ್ಕೆ ತೆರಳುವನು. ಭಕ್ತಿಪರವಶನಾಗಿ ಶಿವ ಕೀರ್ತನೆಯ ಗೀತದಲ್ಲಿ ಬಸವಣ್ಣನು ತೊಡಗಿರಲು ಜಂಗಮಾಕಾರದಲ್ಲಿ ಬಂದ ಸಂಗಮನು, 'ನಡೆಬಸವ ಕೈಲಾಸಗಿರಿಗೆ ಪುಷ್ಪಕದೊಳಗೆ' ಎಂದು ಅಹ್ವಾನಿಸುವನು. 'ಇನ್ನು ಈ ಅಡವಿಯಲ್ಲಿನ ಇರವು ಸಾಕು ನಿನಗೆ ಬಾ ಮಗನೆ' ಎಂದು ಕರೆದಾಗ ಬಸವಣ್ಣನು ನಗುತ 'ಶರಣರೊಕ್ಕುದರ ಸವಿ ಕೈಲಾಸದೊಳಗುಂಟೆ ಶರಣಸಂಗದ ಸುಖವು ಕೈಲಾಸದೊಳಗುಂಟೆ' ಎಂದು ಪ್ರತಿಕ್ರಿಯಿಸುವುದನ್ನು ಕಾಣಬಹುದು. ಬಸವಣ್ಣನು ಒಲ್ಲದಿರುವುದನ್ನು ಅರಿತ ಸಂಗಮೇಶ್ವರನು ಹಿಂದಿರುಗುವನು. ಹೀಗಿರಲು ಶರಣರ ಸಹವಾಸದಲ್ಲಿರುತ್ತ ಹಲವು ಗೀತೆಗಳನ್ನು ಹಾಡುತ್ತಾ ಪವಾಡಗಳನ್ನು ಮೆರೆಯುತ್ತಿದ್ದನು. ರಗಳೆಯ ಕೊನೆಯಲ್ಲಿ ಬಿಜ್ಜಳನ ಬಗೆಗೆ ಮತ್ತು ಅವನ ಪಾಪಕೃತ್ಯದ ಬಗೆಗೆ ಏನನ್ನು ಹೇಳದ ಹರಿಹರನು

" ಶಿವದ್ರೋಹವಂ ಗೈದ ಬಿಜ್ಜಳನ ಕೊಲಿಸುತಂ
ಭವಹರನ ಶರಣಸದ್ಗೋಷ್ಠಿಯಂ ಸಲಿಸುತಂ"

ಎಂದು ಹೇಳಿ ಬಿಜ್ಜಳನ ಅಂತ್ಯವನ್ನು ಕುರಿತು ಮುಕ್ತಾಯಗೊಳಿಸುವನು. ಬಿಜ್ಜಳನ ಕೊಲೆಯನಂತರ ನೊಂದ ಬಸವಣ್ಣನು ಕಪ್ಪಡಿಯ ಸಂಗಮೇಶ್ವರ ದೇವಾಲಯಕ್ಕೆ ಹಿಂದುರುಗಿ, 'ಸಾಕಾರವಲ್ಲದ ನಿರಾಕಾರ ವಡೆಗೊಂಡಿನ್ನು ತೆರಪುಗೊಡು ತಂದೆ ಬಂದಿಹೆನು ಬಸವನು ನೊಂದು' ಎಂಬುದಾಗಿ ಪ್ರಾರ್ಥಿಸಿ, ಭಕ್ತಾದಿಗಳ ಎದುರಲ್ಲಿಯೇ ಸಂಗಮೇಶ್ವರನಲ್ಲಿ ಬೆರೆತು ಬಯಲಾಗುತ್ತಾನೆ. ಶಿವನು ಹೀಗೆ ವೃಷಭನನ್ನು ಭೂಮಿಯಲ್ಲಿ ಮೆರೆಯಿಸಿ ಬಳಿಕ ಅತನನ್ನು ಕೈಲಾಸಕ್ಕೆ ಕರೆದೊಯ್ದನು ಎಂಬುದು ಶಿವಶರಣರ ಚರಿತೆಯನ್ನು ಬಲ್ಲ ಎಲ್ಲರಿಗೂ ತಿಳಿದಿರುವ ಸಂಗತಿಯೇ ಆಗಿದೆ.

# ಅಧ್ಯಾಯ – ೫

## ದ.ರಾ.ಬೇಂದ್ರೆ : ಬದುಕು ಮತ್ತು ಬರಹ

ಕನ್ನಡ ಸಾಹಿತ್ಯಕ್ಕೆ ಮೆರಗನ್ನು ತಂದುಕೊಟ್ಟವರಲ್ಲಿ ದ.ರಾ.ಬೇಂದ್ರೆಯವರು ಪ್ರಮುಖರು.ಇವರದ್ದು ಅಸ್ಖಲಿತವಾದ ಅದ್ಭುತಪ್ರತಿಭೆ. ಸುಮಾರು ಆರು ದಶಕಗಳಿಗಿಂತಲೂ ಹೆಚ್ಚಾಗಿ ಕನ್ನಡ ಸಾರಸ್ವತ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರು ಕಾವ್ಯ, ಕಥೆ, ನಾಟಕ, ವಿಮರ್ಶೆ, ಅನುವಾದ, ವಿಚಾರಸಾಹಿತ್ಯ ಸಂಖ್ಯಾಶಾಸ್ತ್ರ ಇತ್ಯಾದಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃಷಿಮಾಡಿದರು. ಈ ಸಮೃದ್ಧ ಕೃಷಿಯ ಪಸಲನ್ನು ನಾವು ಇಂದಿಗೂ ಅನುಭವಿಸುತ್ತಿದ್ದೇವೆ. ಕನ್ನಡ ಸಾರಸ್ವತ ಲೋಕವಿರುವವರೆಗೆ ಈ ಸಾಹಿತ್ಯ ಕೃಷಿಯ ಪಸಲು ಅಕ್ಷಯವಾಗಿರುತ್ತದೆ.

ಬೇಂದ್ರೆಯವರಿಗೆ ಕಾವ್ಯಸೃಷ್ಟಿ ಹಾಗೂ ಜೀವನಸೃಷ್ಟಿಗಳೆರಡೂ ಪ್ರತ್ಯೇಕ ಕ್ರಿಯೆಗಳಲ್ಲ. ಅವು ಕವಿಯೊಬ್ಬನು ಅನುಭವಿಸುವ ಅತ್ಯಂತ ನೋವಿನ ಆದರೆ ಅತ್ಯಂತ ಸಾರ್ಥಕ ಕ್ರಿಯೆಯಾಗುತ್ತದೆ. ಹಾಗಾಗಿಯೇ 'ಬೆಂದರೆ ಬೇಂದ್ರೆಯಾದಾನು' ಎಂಬ ಮಾತು ಇಂದಿಗೂ ಪ್ರಚಲಿತದಲ್ಲಿದೆ.

'ಬೇಂದ್ರೆ'ಯವರ ಮೂಲಮನೆತನ ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ಕೇಳಸಿ ಗ್ರಾಮದಲ್ಲಿತ್ತು. 'ಬೇನ್‌ರೆ' ಅಥವಾ 'ಬೇಂದ್ರೆ' ಎಂದರೆ ದೇವಾಲಯಗಳಲ್ಲಿ 'ಋಕ್ಕು'ಗಳನ್ನು ಅಂದರೆ ಮಂತ್ರಗಳನ್ನು ಪಠಿಸುವವರು.

ಬೇಂದ್ರೆಯವರ ಮನೆತನದ ಹೆಸರು 'ಬೇನ್‌ರೆ' ಇಂದ 'ಬೇಂದ್ರೆ' ಎಂದು ಪರಿವರ್ತನೆಗೊಂಡ ಬಗೆಯನ್ನು ಅವರ ಮಗನಾದ ಡಾ.ವಾಮನ ಬೇಂದ್ರೆ ಹೀಗೆ ಹೇಳುತ್ತಾರೆ. "ಬೇಂದ್ರೆಯವರ ವಂಶಾವಳಿಯಲ್ಲಿಯ ಮೊದಲಿನ ಮೂರು ತಲೆಮಾರುಗಳ ಹೆಸರು ಇನ್ನೂ ಸಿಕ್ಕಿಲ್ಲ. ಈ ತಲೆಮಾರುಗಳ ಕಾಲಕ್ಕೆ ಬೇಂದ್ರೆ ಮನೆತನದವರ ಅಡ್ಡ ಹೆಸರು 'ಠೋಸರ್' ಎಂದು ಇದ್ದರೂ ಇರಬಹುದು. ಬೇಂದ್ರೆಯವರಿಗೆ 'ಠೋಸರ' ಎಂಬುದಾಗಿ ಅಡ್ಡಹೆಸರಿತ್ತು. ಠೋಸರ ಎಂದರೆ ವೇದಕಾಲದಲ್ಲಿ ಪಶುವನ್ನು ಒಂದು ಠೋಸಾ ಹೊಡೆತದಿಂದ – ಗುದುಕಿಯಿಂದ–ಕೊಲ್ಲುವವರು ಎಂದು ಅರ್ಥ. ಅನಂತರ ಅವರೇ ವೇದ (ವೇಂದ್ರ)+ಪಾಠಕರಾಗಿ, ವೇಂದ್ರ–ಬೇಂದ್ರ–ಬೇಂದ್ರೆ ಆಗಿರಬಹುದು ಎಂದು ಊಹೆ. ಇನ್ನುಳಿದ ಬೇಂದ್ರೆ ಮನೆತನದವರು ತಮ್ಮ ಅಡ್ಡ ಹೆಸರು 'ಖಾಡೀಲಕರ' ಎಂದು ಬದಲು ಮಾಡಿಕೊಂಡ ಉದಾಹರಣೆಗಳಿವೆ".[೧]

ಬೇಂದ್ರೆಯವರ ಮಗನಾದ ಡಾ.ವಾಮನ ಬೇಂದ್ರೆಯವರು ತಮ್ಮ ಮನೆತನದ ವಂಶವೃಕ್ಷವನ್ನು ಈ ರೀತಿ ತೋರಿಸಿದ್ದಾರೆ.

---

೧. ಡಾ.ವಾಮನ ಬೇಂದ್ರೆ. ಬೇಂದ್ರೆ ಜೀವನ ಪರಿಚಯ. ಪುಟ–೦೨

## ಬೇಂದ್ರೆ ಮನೆತನದ ವಂಶವೃಕ್ಷ

"( ಮೂರನೆಯ ತಲೆಮಾರಿನಿಂದ ಉಪಲಬ್ಧ )




ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಅವರು ರಾಮಚಂದ್ರ ಮತ್ತು ಅಂಬವ್ವ ದಂಪತಿಗಳ ಮಗುವಾಗಿ ೧೮೯೬ ರ ಜನವರಿ ೩೧ ಮಾಘವದ್ಯ ಮನ್ಮಥ ನಾಮ ಸಂವತ್ಸರದ ಗುರು ಪ್ರತಿಪದಿ ದಿನದಂದು ಜನಿಸಿದರು. ಗುರುವಾರ 'ನಿವೃತ್ತಿನಾಥರ' ಜನ್ಮದಿನದಂದು ಹುಟ್ಟಿದ ಈ ಮಗುವಿಗೆ ದತ್ತಾತ್ರೇಯ ಎಂದುನಾಮಕರಣವಾಯಿತು. ಬೇಂದ್ರೆಯವರು ೧೨ ವರ್ಷ ವಯಸ್ಸಿನಲ್ಲಿಯೇ ತಮ್ಮ ತಂದೆಯನ್ನು ಕಳೆದು ಕೊಂಡರು. ಅಜ್ಜಿ ಹಾಗೂ ತಾಯಿಯ ಆರೈಕೆಯಲ್ಲಿ ಬೆಳೆದ ಇವರು ಬಡತನ, ಕಷ್ಟ, ನೋವು, ನಿರಾಸೆಗಳ ನಡುವೆ ಬದುಕು ಸಾಗಿಸಿದರು.

ಬೇಂದ್ರೆಯವರ ಬಾಲ್ಯಜೀವನವನ್ನು ಕುರಿತು ಅವರ ಮಗ ವಾಮನಬೇಂದ್ರೆಯವರು ಗುರುತಿಸುವಂತೆ "ಬೇಂದ್ರೆಯವರ ಬಾಲ್ಯ ತಾರುಣ್ಯ ಎಲ್ಲವೂ ಧಾರವಾಡದಲ್ಲಿಯೇ. ಅಜ್ಜಿ ಮಾಡುವ ಚಿದಂಬರ ಭಜನೆ, ತಾಯಿ ಮಾಡುವ ರಾಮ ಭಜನೆ, ತಾಯಿ-ಅಜ್ಜಿಗೆ ಮರಾಠಿ ಪುರಾಣಾದಿಗಳನ್ನು ಓದಿ ತೋರಿಸುವುದು. ಮೊದಲಾದ ಭಕ್ತಿ ಪಥದ ಪರಿಸರದಲ್ಲಿ ಬೇಂದ್ರೆಯವರು ಬೆಳೆದರು. ಬೇಂದ್ರೆಯವರು ಚಿಕ್ಕವರಿದ್ದಾಗ ಗೋಂದವಲೇಕರ ಮಹಾರಾಜರು ಅವರನ್ನು ಎತ್ತಿಕೊಂಡು ಆಶೀರ್ವದಿಸಿದ್ಧರಂತೆ" [೩] ಎಂದಿದ್ದಾರೆ. ಹೀಗಾಗಿ

---

೨. ಡಾ.ವಾಮನ ಬೇಂದ್ರೆ. ಬೇಂದ್ರೆ ಜೀವನ ಪರಿಚಯ. ಪುಟ-೦೨

೩. ಸಂಪಾದಕರು : ಡಾ. ಬುದ್ದಣ್ಣ ಹಿಂಗಮಿರೆ, ಇಳಿದು ಬಾ ತಾಯಿ. ಪುಟ-೫೧೪.

ಬಡತನ ಹಾಗೂ ಆಧ್ಯಾತ್ಮಿಕ ಪರಿಸರಗಳೆರಡೂ ಸೇರಿ ಬೇಂದ್ರೆಯವರಲ್ಲಿ ಆತ್ಮಾಭಿಮಾನ, ಸ್ವಪ್ರಯತ್ನದಲ್ಲಿ ನಂಬಿಕೆಗಳು ಗಟ್ಟಿಯಾಗಿತ್ತು. ಬೇಂದ್ರೆಯವರ ಬಾಲ್ಯಜೀವನದ ಬೆಳವಣಿಗೆಯನ್ನು ಅರಿಯಲು ಅವರೇ ರಚಿಸಿದ 'ಬಾಲ್ಯಕಾಂಡ' ಮತ್ತು 'ಶ್ರಾವಣಬಂತು' ಕವನ ಸಂಗ್ರಹವನ್ನು ನೋಡಬಹುದು.

ಅಜ್ಜಿ ಗೋದೂಬಾಯಿಯ ನಿಧನದ ನಂತರ ಬೇಂದ್ರೆಯವರು ತಮ್ಮ ಬಿ.ಎ.ಪದವಿಯನ್ನು ಪಡೆಯುವ ಕನಸನ್ನು ಈಡೇರಿಸಿಕೊಳ್ಳಲು ಪುಣೆಯಲ್ಲಿದ್ದ ತಮ್ಮ ಚಿಕ್ಕಪ್ಪ ಬಂಡೇಪಂತ ಬೇಂದ್ರೆಯವರನ್ನು ಆಶ್ರಯಿಸಿಬೇಕಾಯಿತು.

ಅಲ್ಲಿ ಬೇಂದ್ರೆಯವರಿಗೆ ಮರಾಠಿ ಭಾಷೆಯ ಪ್ರಭಾವ ಉಂಟಾಯಿತು.ಅಲ್ಲದೆ ಕಾಳಿದಾಸನ 'ಶಾಕುಂತಲ' ಜಗನ್ನಾಥ ಪಂಡಿತನ 'ಗಂಗಾಲಹರಿ', ಶಂಕರಾಚಾರ್ಯರ 'ಸೌಂದರ್ಯಲಹರಿ', ಜ್ಞಾನೇಶ್ವರನ 'ಜ್ಞಾನೇಶ್ವರಿ' ಶೇಕ್ಸ್‌ಪಿಯರ್, ಶೆಲ್ಲಿ, ಕೀಟ್ಸ್, ಎಮರ್ಸನ್, ರವೀಂದ್ರನಾಥ ಠಾಗೋರ್ ಮೊದಲಾದ ಕವಿ-ತತ್ತ್ವಜ್ಞರ ಕೃತಿಗಳನ್ನು ಓದುವ ಸದಾವಕಾಶ ಮೂಡಿತು. ಅವುಗಳನ್ನು ಸ್ನೇಹಿತರೊಂದಿಗೆ, ಅಧ್ಯಾಪಕರೊಂದಿಗೆ ಚರ್ಚಿಸುತ್ತಿದ್ದರು. ಹೀಗಾಗಿ ಅವರಲ್ಲಿ ಈ ಹಿಂದೆಯೇ ಚಿಗುರೊಡೆದಿದ್ದ ಸೃಜನಶೀಲತೆಗೆ ಸ್ಪಷ್ಟರೂಪ ಮೂಡತೊಡಗಿತು. ಇದರ ಪರಿಣಾಮವಾಗಿ ಕ್ರಿ.ಶ.೧೯೧೫ರಲ್ಲಿ ಪುಣೆಯಲ್ಲಿ 'ಶಾರದಾಮಂಡಲ' ವೆಂಬ ಗೆಳೆಯರ ಬಳಗ ಬೇಂದ್ರೆಯವರ ನೇತೃತ್ವದಲ್ಲಿ ನಿರ್ಮಾಣವಾಯಿತು. ಇಲ್ಲಿ ಕಾವ್ಯ, ನಾಟಕ, ಶಾಸ್ತ್ರ, ವಿಜ್ಞಾನ, ರಾಜಕಾರಣಗಳ ಬಗೆಗೆ ಚರ್ಚೆ ನಡೆಯುತ್ತಿತ್ತು. ಬೇಂದ್ರೆಯವರು ಮರಾಠಿಯಲ್ಲಿ ತಮ್ಮ ಮೊಟ್ಟ ಮೊದಲ ಕವನ 'ಝೂಲೀ ವೀಸ ವಯಾಸ ಅಜ' ವನ್ನು ರಚಿಸಿದರು.

ಬೇಂದ್ರೆಯವರು ೧೯೧೯ರಲ್ಲಿ ಲಕ್ಷ್ಮೀಬಾಯಿಯವರನ್ನು ವಿವಾಹವಾದರು. ಅವರ ಬಹಳಷ್ಟು ಕಾವ್ಯಕೃಷಿಗೆ ಪತ್ನಿಯೇ ಸ್ಫೂರ್ತಿಯಾದರು. ಅವರ ದಾಂಪತ್ಯದ ಫಲವಾಗಿ ಒಟ್ಟು ಒಂಬತ್ತು ಜನ ಮಕ್ಕಳು ಜನಿಸಿದರು. ಅವರಲ್ಲಿ ಬದುಕಿದವರು ಪಾಂಡುರಂಗ, ಮಂಗಲಾ ಮತ್ತು ವಾಮನ ಮಾತ್ರ. ಇವರಲ್ಲಿ ವಾಮನಬೇಂದ್ರೆಯವರು 'ಲಕ್ಷ್ಮೀಶನ ಜೈಮಿನಿ ಭಾರತ ಒಂದು ಅಧ್ಯಯನ' ಎಂಬ ಮಹಾ ಪ್ರಬಂಧ ಬರೆದು ಪಿ.ಎಚ್.ಡಿ ಪಡೆದಿದ್ದಾರೆ. ಧಾರವಾಡದ ಕಿಟೆಲ್ ಮಹಾವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ, ಅಲ್ಲದೆ ಬೇಂದ್ರೆಸಾಹಿತ್ಯದ ಸಂಪಾದನಾಕಾರ್ಯ ಹಾಗೂ ಪ್ರಚಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಬೇಂದ್ರೆಯವರತಾಯಿ ಅಂಬವ್ವ ೧೯೨೪ರಲ್ಲಿ ತೀರಿಕೊಂಡರು. "ತಾಯಿಯನ್ನು ಕಳೆದುಕೊಂಡ ಬೇಂದ್ರೆಯವರಿಗೆ ಮುಂದಿನ ಜೀವನದಲ್ಲಿ ತಾಯಿ ಅರ್ಥಪೂರ್ಣವಾದ ಪ್ರತೀಕವಾದಳು. ಧಾರವಾಡ, ಕರ್ನಾಟಕ, ಭಾರತ, ವಿಶ್ವಲಲಿತ, ಗಾಯತ್ರಿ, ಪಾಂಡಿಚೇರಿಯ ಮದರಗಂಗೆ ಇವೆಲ್ಲ ತಾಯ್ತನದ ಸೃಜನ ಮತ್ತು ಧಾರಣ ಶಕ್ತಿಯ ವಿವಿಧ ಪ್ರತಿಮೆಗಳಾಗಿವೆ."[೪] ಹೀಗೆ ಬೇಂದ್ರೆಯವರಿಗೆ ಹೆತ್ತ ತಾಯಿಯು ಹೊತ್ತ ಭೂಮಿಯಂತಾದಳು,ಸಾಕ್ಷಾತ್ ದೇವತೆಯಂತೆ ಕಂಡಳು.

---

೪. ಸಂಪಾದಕರು : ಡಾ. ಬುದ್ದಣ್ಣ ಹಿಂಗಮಿರೆ, ಇಳಿದು ಬಾ ತಾಯಿ. ಪುಟ-೫೨೦

ಕಡುಬಡತನದ ಜೀವನಸಾಗಿಸಿದ ಬೇಂದ್ರೆಯವರಿಗೆ ಸಾಹಿತ್ಯ ಸರಸ್ವತಿಯು ಒಲಿದುಬಂದಳಾದರೂ ಸಹ ಲಕ್ಷ್ಮೀಕಟಾಕ್ಷವಾಗಲಿಲ್ಲ. ಬರವಣಿಗೆಯ ಪ್ರವೃತ್ತಿಯು ಹೃದಯವನ್ನು ತುಂಬಿಸಿತು. ಶಿಕ್ಷಕ ವೃತ್ತಿಯು ಬದುಕನ್ನು ಮುನ್ನಡೆಸಿತು. ಈ ಮೂಲಕ ಸಾವಿರಾರೂ ವಿದ್ಯಾರ್ಥಿಗಳಲ್ಲಿ ಕನ್ನಡತನ, ರಾಷ್ಟ್ರೀಯಪ್ರಜ್ಞೆ ಜಾಗೃತಗೊಂಡಿತು. ಈ ನಡುವೆ ಬೇಂದ್ರೆಯವರು ಮಾಸ್ತಿ ವೆಂಕಟೇಶ ಅಯ್ಯಂಗಾರರು ನಡೆಸುತ್ತಿದ್ದ 'ಜೀವನ' ಪತ್ರಿಕೆಯಲ್ಲಿ ಸಂಪಾದಕರಾಗಿ ದುಡಿದರು. ಇದರಿಂದ ಕನ್ನಡ ಸಾರಸ್ವತ ಲೋಕದೊಂದಿಗೆ ನಿಕಟ ಬಾಂಧವ್ಯ ಉಂಟಾಯಿತು. ಧಾರವಾಡದ ಆಕಾಶವಾಣಿ ಕೇಂದ್ರದ ಸಾಹಿತ್ಯ ಸಲಹೆಗಾರರಾಗಿಯು ಸೇವೆ ಸಲ್ಲಿಸಿದ 'ಬೇಂದ್ರೆ ಮಾಸ್ತರ'ರು ಕನ್ನಡತಾಯಿಯತೇರನ್ನು ಎಳೆಯುವಲ್ಲಿ ಸದಾ ಮುಂಚೂಣಿಯಲ್ಲಿದ್ದರು.

ಬೇಂದ್ರೆಯವರು ತಮ್ಮ ಜೀವನದ ಕೊನೆಯ ದಿನಗಳಲ್ಲಿ ಹೆಚ್ಚಾಗಿ ಸಂಖ್ಯೆಯ ಬಗೆಗೆ ಕುರಿತು ಸಾಕಷ್ಟು ಯೋಚಿಸುತ್ತಿದ್ದರು. ಇದರೊಂದಿಗೆ ಸಂಖ್ಯಾಶಾಸ್ತ್ರದೆಡೆಗೆ ಆಕರ್ಷಣೆಗೊಳಗಾದರು. ಈ ಸಂದರ್ಭದಲ್ಲಿ ಅವರಿಗೆ ವೇದ,ಉಪನಿಷತ್ತು,ವಿಶ್ವೋತ್ಪತ್ತಿ ಶಾಸ್ತ್ರ,ಭೌತವಿಜ್ಞಾನ,ಜೀವಶಾಸ್ತ್ರ,ಭೂರಚನಾಶಾಸ್ತ್ರ ಮೊದಲಾದ ವಿಷಯಗಳ ಅಧ್ಯಯನದಲ್ಲಿ ಅವರಿಗೆ ಯಾವುದೇ ಸಂಖ್ಯೆ ಸಿಕ್ಕಾಗ ಅತೀವ ಆನಂದವಾಗುತ್ತಿತ್ತು. ಆದರೆ ಬೇಂದ್ರೆಯವರು ಕೊಟ್ಟ ಸಾಹಿತ್ಯ ರತ್ನಗಳು ಸಂಖ್ಯೆಗಳನ್ನು ಮೀರಿದ್ದು ಎಂದು ಹೇಳಬೇಕಾಗಿಲ್ಲ.

"ಆಧುನಿಕ ಸಾಹಿತ್ಯದಲ್ಲಿ ಕಾದಂಬರಿಯ ವಸ್ತುವಾಗಬಲ್ಲ ವೈವಿಧ್ಯಮಯ ಜೀವನ ನಡೆಸಿದವರು ಬೇಂದ್ರೆಯವರನ್ನು ಬಿಟ್ಟು ಬೇರೊಬ್ಬರಿಲ್ಲ."[೫] ಎನ್ನುವ ಮಾತಿನಲ್ಲಿ ಅರ್ಥವಿಲ್ಲದೇ ಇಲ್ಲ. ಕಡುಬಡತನ, ವಿದ್ಯೆಗಾಗಿ ಊರೂರು ಅಲೆದಾಟ, ನೌಕರಿಗಾಗಿ ತಿರುಗಾಟ, ಸಾಂಸಾರಿಕ ತೊಂದರೆಗಳು, ರಕ್ತ ಸಂಬಂಧಿಗಳ ಸಾವು ಒಬ್ಬ ಮನುಷ್ಯನನ್ನು ಹಲವು ವಿಧದಲ್ಲಿ ಕಾಡಲು ಸಾಕು. ಈ ಎಲ್ಲ ದುಃಖ ದುಮ್ಮಾನ, ಕಷ್ಟ ಕಾರ್ಪಣ್ಯ ಗಳನ್ನು ಎದುರಿಸಿ ತನ್ನ ಚಿಂತನೆಯನ್ನು ಹರಿತಗೊಳಿಸುತ್ತ, ತಾತ್ವಿಕ ಕಾಳಜಿಗಳನ್ನು ತೀವ್ರಗೊಳಿಸುತ್ತ, ಕಂಡುಂಡ ಅನುಭವಗಳನ್ನೇ ತನ್ನ ಅಭಿವ್ಯಕ್ತಿ ಮಾಧ್ಯಮಕ್ಕೆ ವಸ್ತುವಾಗಿಸುತ್ತ ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದದ್ದು ಬೇಂದ್ರೆಯವರ ಮಹತ್ವದ ಸಾಧನೆಯೆನ್ನಲೇಬೇಕು. ಹಾಗಾಗಿಯೇ ಸಾವಿರಾರು ಸೃಜನಶೀಲ ಬರವಣಿಗೆಗಳ ನಡುವೆಯು ಬೇಂದ್ರೆಯವರ ಸಾಹಿತ್ಯಕೃಷಿಯ ಫಲವನ್ನು ನಿಖರವಾಗಿ ಗುರುತಿಸಲು ಸಾಧ್ಯ.

ಬೇಂದ್ರೆಯವರನ್ನೇ ಕಥಾ ನಾಯಕನನ್ನಾಗಿ ಮಾಡಿಕೊಂಡ ಕಾದಂಬರಿಯೊಂದು ಕ್ರಿ.ಶ.೨೦೦೦ರಲ್ಲಿ ಪ್ರಕಟಗೊಂಡಿದೆ. ('ಧಾರವಾಡದ ದತ್ತೂಮಾಸ್ತರ.' ಎನ್ಕೆ ಕುಲಕರ್ಣಿ : ಅಮೋಘವಾಙ್ಮಯಪ್ರಸಾರ. ಬೆಳಗಾವಿ). ಈ ಕುರಿತು ಹಾ.ಮಾ. ನಾಯಕರು "ಬೇಂದ್ರೆಯವರ ಬದುಕೇ ಒಂದು ವಿಚಿತ್ರ ,ಅವರು ಬಹಳಷ್ಟು ದುಃಖವನ್ನು ಅನುಭವಿಸಿದರು.

---

೫. ಸುಧಾ ವಾರಪತ್ರಿಕೆ ೨೧ ಸೆಪ್ಟಂಬರ್ ೨೦೦೦. ಬೇಂದ್ರೆ ಜೀವನ ದರ್ಶನ– ಹಾ.ಮಾ.ನಾಯಕ

ಅವರೊಬ್ಬ ಸಹಜಕವಿ; ಮಹಾಪ್ರತಿಭಾವಂತ; ಅವರದು ಬಹುಮುಖವ್ಯಕ್ತಿತ್ವ, ಋಷಿಸದೃಶ್ಯರಾಗಿದ್ದ ಬೇಂದ್ರೆಯವರು ರಸಿಕರಾಗಿಯೂ ಇದ್ದರು. ಗಾರುಡಿಗರೆನ್ನಿಸಿದ ಅದ್ಭುತವಾಗ್ಮಿಯಾಗಿದ್ದರು. ಅವರು ಬದುಕಿನಲ್ಲಿ ಬೆಂದಿದ್ದರು. 'ಬೆಂದರೆ ಬೇಂದ್ರೆಯಾದಾನು' ಎಂಬುದು ಪ್ರಚಲಿತ ಮಾತು! ಅವರುಂಡ ನೋವು ಈ ಕಾದಂಬರಿಯ ವಸ್ತು."[೬] ಎಂದು ಹೇಳಿದ್ದಾರೆ.

"ಬೇಂದ್ರೆಯವರು ತಮ್ಮ ಇಡೀ ಜೀವಮಾನದಲ್ಲಿ ಯಾರಿಗೂ ಬಗ್ಗಿದವರಲ್ಲ. ತಮ್ಮ ಮಾತನ್ನೇನಡೆಸಿದವರು. ಅವರ ಲಿವರ್ ಅವರ ಮಾತನ್ನೇ ಕೇಳದಂತಾಗಿ ೨೬.೧೦.೧೯೮೧ ರಂದು ಮಧ್ಯಾಹ್ನ ೧.೧೮ಕ್ಕೆ ನಿರ್ವಾಣ ಹೊಂದಿದರು."[೭] ಆದರೂ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದ ಕನ್ನಡದ ಹಿರಿಯಜ್ಜ ದ.ರಾ. ಬೇಂದ್ರೆಯವರು ನಮ್ಮಿಂದ ದೈಹಿಕವಾಗಿ ದೂರವಾಗಿದ್ದಾರೆಯೇ ವಿನಃ ಅವರು ಕೊಡುಗೆಯಾಗಿ ನೀಡಿದ ಸಾಹಿತ್ಯ ರತ್ನಗಳಿಂದಲ್ಲ ಎಂದು ನಮಗೆ ನಾವೇ ಸಾಂತ್ವನ ಹೇಳಿಕೊಳ್ಳಬೇಕಷ್ಟೆ.

## ದ.ರಾ.ಬೇಂದ್ರೆಯವರ ಸಾಹಿತ್ಯಿಕ ಕೊಡುಗೆಗಳು:

ಬೇಂದ್ರೆಯವರು ಕನ್ನಡದ ವರಕವಿ. ಬೇಂದ್ರೆಮಾಸ್ತರರು ಕನ್ನಡದ ಮನಸ್ಸುಗಳಿಗೆ ತಮ್ಮ ಸಾಹಿತ್ಯ ಕೃಷಿಯಿಂದ ಭಾವನೆಗಳನ್ನು ತುಂಬಿದವರು.

ಒಬ್ಬ ಮಹಾಕವಿ ಯುಗಕ್ಕೊಮ್ಮೆ ಅವತರಿಸುತ್ತಾನೆ. ಒಬ್ಬ ಶ್ರೇಷ್ಠ ಕವಿ ಹಲವಾರು ದಶಕಕ್ಕೆ ಒಮ್ಮೆ ಕಾಣಿಸಿಕೊಳ್ಳುತ್ತಾನೆ. ಜೀವನವನ್ನು ರೂಪಿಸುವ, ಮೌಲ್ಯಗಳನ್ನು ನಿರೂಪಿಸುವ, ಜನಾಂಗವನ್ನು ತಿದ್ದುವ ಸದಭಿರುಚಿಯನ್ನು ಬೆಸೆಯುವ ಕೆಲಸವನ್ನು ತನ್ನ ಸಾಹಿತ್ಯದಮೂಲಕ ಮಾಡುತ್ತಾನೆ. ಹೀಗಾಗಿ ಇಂತಹ ಕವಿಗಳ ಕಾವ್ಯ, ಚರ್ಚೆ, ಕಾವ್ಯಮೀಮಾಂಸೆ ನಾಟಕ, ಕಾವ್ಯ, ವಿಮರ್ಶೆಯೆಂದರೆ ಅದೊಂದು ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಅರ್ಥಪೂರ್ಣಚಿಂತನೆಯಾಗುತ್ತದೆ. ಇದು ಸಾಮಾಜಿಕವಾಗಿಯೂ ಅತ್ಯಮೂಲ್ಯವಾದುದೂ ಆಗುತ್ತದೆ.

ಬೇಂದ್ರೆಯವರು ಮರಾಠಿ ನೆಲದಲ್ಲಿ ನಿಂತು ಕನ್ನಡಕಾವ್ಯಕೃಷಿಗೆ ತೊಡಗಿದವರು. ಇವರು ಸಾಹಿತ್ಯಿಕ ಜೀವನದೊಳಗೆ ಪ್ರವೇಶಿಸುವ ಸಂದರ್ಭದಲ್ಲಿ ಭಾರತವು ಬ್ರಿಟೀಷರ ಕಪಿಮುಷ್ಟಿಯಿಂದ ಬಿಡುಗಡೆ ಪಡೆಯುವ ಹೋರಾಟದಲ್ಲಿ ಮಗ್ನವಾಗಿತ್ತು. ಒಂದುಕಡೆ ರಾಷ್ಟ್ರೀಯತೆ, ಮತ್ತೊಂದೆಡೆ ಗಾಂಧೀಜಿಯವರ ಪ್ರಭಾವದ ಪ್ರಾದೇಶಿಕ ಸಂಸ್ಕೃತಿಯು ಇವರ ಮೇಲೆ ಪ್ರಬಲವಾಗಿ ಉಂಟಾಯಿತು.

ಬೇಂದ್ರೆಯವರ ಮೇಲಾದ ಪ್ರಭಾವದ ಬಗ್ಗೆ ಸುಮತೀಂದ್ರ ನಾಡಿಗ ಅವರು ಬರೆಯುತ್ತಾ "ಆ ಕವಿ ಹಳೆಗನ್ನಡ ಕವಿಗಳ, ಸಂಸ್ಕೃತ ಕವಿಗಳ, ಜಾನಪದ ಕವಿಗಳ,ಮರಾಠಿ

೬. ಸುಧಾ ವಾರಪತ್ರಿಕೆ ೨೧ ಸೆಪ್ಟಂಬರ್ ೨೦೦೦. ಬೇಂದ್ರೆ ಜೀವನ ದರ್ಶನ– ಹಾ.ಮಾ.ನಾಯಕ

೭. ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ ಪುಟ–೬೭

ಕವಿಗಳ, ಇಂಗ್ಲೆಂಡಿನ ರೊಮ್ಯಾಂಟಿಕ್ ಕವಿಗಳ ಸತ್ವಗಳನ್ನು ತಮ್ಮದಾಗಿಸಿಕೊಂಡಿದ್ದಾರೆ. ಭಾರತದ ಸ್ವಾತಂತ್ರ್ಯ ಹೋರಾಟ, ಕರ್ನಾಟಕ ಏಕೀಕರಣ, ಹೊಸ ಸಮಾಜದ ಕನಸು ಇವರ ಕಾವ್ಯಕ್ಕೆ ರಾಜಕೀಯ ಆಯಾಮವನ್ನು ಒದಗಿಸಿದೆ. ಸುನೀತ, ಸೀಸಪದ್ಯ ವಚನಗಳು, ಷಟ್ಪದಿ ಕಂದ, ವೃತ್ತ, ಹಾಡುಗಳು, ಭಾವಗೀತೆ, ಲಾವಣಿ, ತ್ರಿಪದಿ, ರಗಳೆ, ಕೀರ್ತನೆ, ಬೆಡಗು ಮೊದಲಾದ ಅನೇಕ ಪ್ರಕಾರಗಳನ್ನು ಈ ಕವಿ ಬಳಸಿದ್ದಾರೆ. ಪ್ರಕೃತಿ, ಪ್ರೇಮ ಅಧ್ಯಾತ್ಮ ಅನುಭವ, ಕೌಟುಂಬಿಕ ಸಂಬಂಧ, ಕಾವ್ಯ ಮೀಮಾಂಸೆ, ನಾಡು–ನುಡಿಗಳ ವ್ಯಕ್ತಿಗಳು ಮತ್ತು ಸ್ಥಳಗಳು ಇವರ ಕಾವ್ಯದ ವಸ್ತುಗಳಾಗಿವೆ. ದೇವರು, ಪ್ರಕೃತಿ, ಮನುಷ್ಯ, ಸಮಾಜ, ಸಂಸ್ಕೃತಿ ರಾಜಕೀಯ ಮತ್ತು ವ್ಯವಸ್ಥೆ ಕಾಮ, ಪ್ರೇಮ, ಮೃತ್ಯು ಇವುಗಳ ಬಗ್ಗೆ ಇವರ ಕಾವ್ಯದಲ್ಲಿ ಖಚಿತವಾದ ಧೋರಣೆಗಳಿವೆ. ಠಾಗೂರ್, ಅರಬಿಂದೋ, ಶೆಲ್ಲಿ, ಕೀಟ್ಸ್, ಎಈ ಪುರಂದರದಾಸ, ಅಲ್ಲಮ, ಲಕ್ಷ್ಮೀಶ, ಸರ್ವಜ್ಞ, ರತ್ನಾಕರವರ್ಣಿ, ಕನಕದಾಸ, ಕಾಳಿದಾಸ, ಕೇಶವಸುತ, ಶಾಂತಕವಿ ಹೀಗೆ ಅನೇಕ ಕವಿಗಳ ಹಿನ್ನೆಲೆ ಈ ಕವಿಯ ಕಾವ್ಯಕ್ಕಿರುವುದರಿಂದ ಪೌರ್ವಾತ್ಯ ಮತ್ತು ಪಾಶ್ಚಾತ್ಯ ಕಾವ್ಯಗಳ ಸತ್ವ ಮತ್ತು ವೈವಿಧ್ಯ ಇಲ್ಲಿ ಕಾಣಿಸುತ್ತದೆ. ಈ ಕವಿ ಕಾವ್ಯಪರಂಪರೆಯಲ್ಲಿದ್ದು ತಮ್ಮ ಪ್ರತಿಭಾ ವಿಶೇಷದಿಂದ ಪರಂಪರೆಯ ಘನ ಮೌಲ್ಯಮಾಪನಕ್ಕೆ ಕಾರಣರಾಗುತ್ತಾರೆ. ಆದ್ದರಿಂದ ಬೇಂದ್ರೆಯವರ ಕಾವ್ಯದ ಅಭ್ಯಾಸ ಕನ್ನಡ ಕಾವ್ಯದ ವೈಶಿಷ್ಟ್ಯದ ಅಭ್ಯಾಸವೂ ಆಗುತ್ತದೆ".[೮]

ಇಂತಹ ಬೇಂದ್ರೆಯವರ ಸಾಹಿತ್ಯಿಕ ಕೊಡುಗೆಗಳತ್ತ ದೃಷ್ಟಿ ಬೀರುವುದು ಒಳಿತು.

**ಕಾವ್ಯಗಳು :**

ಬೇಂದ್ರೆಯವರು ನವೋದಯ ಪರಂಪರೆಗೆ ಸೇರಿದ ಶ್ರೇಷ್ಠಕವಿ, ಇವರ ಮೊದಲ ಕಾವ್ಯಸಿದ್ದಿ ಕವಿತೆಯ ಮೂಲಕ ರೂಪ ಪಡೆಯಿತು. ಕಾವ್ಯಯೋಗವೆಂದರೆ ಕವಿಯ ಕರ್ಮಯೋಗ, ಲೋಕಸಂಗ್ರಹದ ಇಚ್ಛೆಯಿಂದ ಜಗತ್ತಿನ ಕಲ್ಯಾಣಕ್ಕಾಗಿ ಕುಶಲತೆಯಿಂದ ಮಾಡಿದ ಕೆಲಸವಿದು."[೯] ಎನ್ನುವ ಬೇಂದ್ರೆಯವರ ಕಾವ್ಯವನ್ನು ಕುರಿತ ಪ್ರತಿಕ್ರಿಯೆ ಅರ್ಥಪೂರ್ಣವಾದುದು. ಕೃಷ್ಣ ಕುಮಾರಿ (೧೯೨೨), ಗರಿ (೧೯೩೨), ಮೂರ್ತಿ ಮತ್ತು ಕಾಮಕಸ್ತೂರಿ (೧೯೩೪), ಸಖೀಗೀತ (೧೯೩೭), ಉಯ್ಯಾಲೆ(೧೯೩೮), ನಾದಲೀಲೆ (೧೯೩೮), ಶ್ರಾವಣ ಪ್ರತಿಭೆ (೧೯೮೩) ಮೊದಲಾದ ೩೭ ಕವನಸಂಕಲನಗಳನ್ನು ರಚಿಸಿದ್ದಾರೆ. (ನಾರಾಯಣ ಸಂಮರೊಡನೆ) ೧೯೬೭ರಲ್ಲಿ ನೂರೊಂದು ಕವನ, ೧೯೬೮ರಲ್ಲಿ ಕಬೀರವಚನಾವಲಿ (ಗುರುನಾಥ ಜೋಷಿಯವರೊಡನೆ), ೧೯೭೫ರಲ್ಲಿ ಭಗ್ನಮೂರ್ತಿ(ಮರಾಠಿಯಿಂದ) ಎಂಬ ಅನುವಾದ ಕವನಸಂಕಲನವನ್ನು ರಚಿಸಿದ್ದಾರೆ.

ಬೇಂದ್ರೆಯವರು 'ವರಕವಿ'ಯಷ್ಟೆ ಅಲ್ಲ. ಅವರೊಬ್ಬ ಸಂಶೋಧಕರು, ವಿಮರ್ಶಕರೂ ಆಗಿದ್ದಾರೆ. ಗದ್ಯ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿಯು ಅವರು ಹೆಸರು ಮಾಡಿದ್ದಾರೆ."ಬೇಂದ್ರೆಯವರ ಗದ್ಯವೆಲ್ಲ ಸರಸ್ವತಿಯ ಸೂತ್ರ ; ಮಾತೆಲ್ಲ ಭಾಷ್ಯ:

---

೮. ಡಾ॥ ಸುಮತೀಂದ್ರ ನಾಡಿಗ: ಬೇಂದ್ರೆ ಕಾವ್ಯದಲ್ಲಿ ವಿಭಿನ್ನ ನೆಲೆಗಳು. ಪುಟ–೨

೯. ಡಾ॥ ಸುಮತೀಂದ್ರ ನಾಡಿಗ: ಬೇಂದ್ರೆ ಕಾವ್ಯದಲ್ಲಿ ವಿಭಿನ್ನ ನೆಲೆಗಳು. ಪುಟ–೪

ಕಾವ್ಯವೆಲ್ಲ ಟೀಕೆ; ಜೀವನವೆಲ್ಲ ಟಿಪ್ಪಣಿ. ಹಳೆಯದರಲ್ಲಿ,ಹೊಸದರಲ್ಲಿ ಎಲ್ಲದರಲ್ಲೂ ಆಳದಲ್ಲಡಗಿರುವ ಗುಣಾಂಶವನ್ನು ಅವರ ಗರುಡ ದೃಷ್ಟಿ ಎಂದೂ ಕಾಣದೇ ಬಿಡುವುದಿಲ್ಲ"[೧೦] ಬೇಂದ್ರೆಯವರ ಜೀವದೃಷ್ಟಿ ಲೋಕವನ್ನು ಗ್ರಹಿಸುವ ಹಾಗೂ ಸಾಹಿತ್ಯದ ಮೂಲಕ ಅದನ್ನು ಬಿಂಬಿಸುವ ಸೂಕ್ಷ್ಮವನ್ನು ಸ್ಪಷ್ಟಪಡಿಸುತ್ತದೆ.

೧. ಸಾಹಿತ್ಯ ಮತ್ತು ವಿಮರ್ಶೆ ೧೯೩೭

೨. ಸಾಹಿತ್ಯ ಸಂಶೋಧನ ೧೯೪೦

೩. ವಿಚಾರ ಮಂಜರಿ ೧೯೪೫

೪. ಮಹಾರಾಷ್ಟ್ರ ಸಾಹಿತ್ಯ ೧೯೫೯

೫. ಜೈಮಿನಿ ಭಾರತಕ್ಕೆ ಮುನ್ನುಡಿ ೧೯೫೪

೬. ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕ ರತ್ನಗಳು ೧೯೬೮

೭. ಮಾತೆಲ್ಲ ಜ್ಯೋತಿ ೧೯೭೨

೮. ಸಾಹಿತ್ಯದ ವಿರಾಟ್ ಸ್ವರೂಪ ೧೯೭೪

೯. ಕುಮಾರವ್ಯಾಸ ೧೯೭೬

೧೦. ಮತಧರ್ಮ ಮತ್ತು ಆಧುನಿಕ ಮಾನವ ೧೯೭೯–ಇವು ಬೇಂದ್ರೆಯವರು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ ಗದ್ಯ ಕೃತಿಗಳಾಗಿದೆ.

ಬೇಂದ್ರೆಯವರು ಕನ್ನಡದ ವರಕವಿಯಾಗಿ ಪ್ರಸಿದ್ಧರು. ಸಾಹಿತ್ಯವಲಯದಲ್ಲಿ ಅವರು ಎದ್ದುಕಾಣುವುದು ಕವಿಯಾಗಿಯೇ, ಇವರು ಉತ್ತಮ ನಾಟಕಕಾರರಾಗಿ ರೂಪುಗೊಳ್ಳುತ್ತಿರುವಾಗಲೇ ಆ ಮಾಧ್ಯಮದಿಂದ ತುಸುದೂರ ಸರಿದರು ಎಂದೇ ಹೇಳಬಹುದು. ಹೀಗಾಗಿ ಓದುಗರ ಮತ್ತು ವಿಮರ್ಶಕರ ದೃಷ್ಟಿಯಲ್ಲಿ ಬೇಂದ್ರೆಯವರು ಕವಿಯೇ ಹೊರತು ನಾಟಕಕಾರರಲ್ಲ.ಆದರೆ ದ.ರಾ.ಬೇಂದ್ರೆಯವರು ಕಾವ್ಯದಂತೆಯೇ ಕತೆ, ಸಂಶೋಧನೆ, ವಿಮರ್ಶೆ ಮತ್ತು ನಾಟಕ ಕೃಷಿಯಲ್ಲಿಯೂ ಕೂಡ ಅಷ್ಟೇ ಸಾಧನೆಯನ್ನು ಮಾಡಿದ್ದಾರೆ ಎಂಬುದು ವಾಸ್ತವಕ್ಕೆ ಹತ್ತಿರವಾದ ಸಂಗತಿಯಾಗಿದೆ.

ಬಾಲ್ಯದಿಂದಲೇ ಬೇಂದ್ರೆಯವರು ಸೃಜನಾತ್ಮಕ ಚಟುವಟಿಕೆಗಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಪ್ರಾಥಮಿಕ ಶಾಲೆಯಲ್ಲಿರುವಾಗಲೇ ಶೇಕ್ಸ್‌ಪಿಯರನ 'ಮರ್ಚಂಟ್ ಆಫ್ ವೆನಿಸ್' ಎಂಬ ನಾಟಕದಲ್ಲಿ ಪಾತ್ರವನ್ನು ಮಾಡಿದ್ದರು. ವಿದ್ಯಾಭ್ಯಾಸಕ್ಕೆಂದು ಪುಣೆಗೆ ತೆರಳಿದಾಗ ಮರಾಠಿ ನಾಟಕಗಳಿಂದಲೂ ಪ್ರಭಾವಿತರಾಗಿದ್ದ ಬೇಂದ್ರೆಯವರು ರಂಶ್ರೀ. ಮುಗಳಿ, ವಿ.ಕೃ.ಗೋಕಾಕ ಮತ್ತು ಜಿ.ಬಿ.ಜೋಶಿಯವರ ಒಡನಾಟದಲ್ಲಿ ಬೇಂದ್ರೆಯವರು ೧೯೨೦ರಲ್ಲಿ 'ಗೋಲ್' ಎಂಬ ನಾಟಕವನ್ನು ಬರೆದರು. ಇದು ಅವರು ಬರೆದ ಪ್ರಥಮ ನಾಟಕ. ಈ ನಾಟಕದ ಲೇಖಕರ ನುಡಿಯಲ್ಲಿ ಬೇಂದ್ರೆಯವರು "ಗೋಲ್ ಎಂದರೆ 'ಗುರಿ', ಜೀವನದಲ್ಲಿ ಕುರಿಯಂತೆ ದಾರಿ ಹಿಡಿಯುವವರು ಬಹಳ. ಆದರೆ ಗುರಿಯ ದಾರಿಯಿಂದ ನಡೆಯುವವರು ಬಹಳ ಕಡಿಮೆ"[೧೧] ಎಂದು ಮಾರ್ಮಿಕವಾಗಿ ನುಡಿದಿದ್ದಾರೆ.

---

೧೦. ಸಂಪಾದಕರು: ಡಾ॥ ಬುದ್ದಣ್ಣ ಹಿಂಗಮಿರೆ: ಇಳಿದು ಬಾ ತಾಯಿ ಪುಟ ೬೮

೧೧. ದ.ರಾ.ಬೇಂದ್ರೆ : ಗೋಲ್ (ಸಂಪಾದಕರ ನುಡಿ) ಪುಟ–೦೩

ಶ್ರೀ ಅರವಿಂದರ Thoughts and Glimpses Aphorisous ಎಂಬ ಪುಸ್ತಕದ The Goal ಎಂಬ ಲೇಖನವು ಬೇಂದ್ರೆಯವರ ವಿಚಾರಗಳಿಗೆ ದಿಕ್ಸೂಚಿಯಾಯಿತು.

೧೯೨೪ ರಲ್ಲಿ ಬೇಂದ್ರೆಯವರು 'ತಿರುಕರ ಪಿಡುಗು' ಎಂಬ ಏಕಾಂಕ ನಾಟಕವನ್ನು ರಚಿಸಿದರು. "ಶ್ರೀಮಂತರು ಹೃದಯ ಶ್ರೀಮಂತರಾಗಬೇಕು ಮತ್ತು ತಿರುಕರ ತಿರುಕುತನ ಹೋಗಿ ಅವರು ಉದ್ಯೋಗ ಪ್ರಿಯರಾಗಬೇಕು."[೧೨] ಎಂಬುದು ನಾಟಕದ ವಸ್ತು. ಬೇಂದ್ರೆಯವರ ಈ ಆಶಯ ಇಂದಿಗೂ ಈಡೇರದಿರುವುದು ಖೇದವೇ ಸರಿ.

೧೯೨೫ರಲ್ಲಿ ರಚನೆಯಾದ 'ಸಾಯೋ ಆಟ' ನಾಟಕದಲ್ಲಿ 'ನಮನ' ಕವನದ ೧೬ನೇ ಪದ್ಯವನ್ನು (ಇದು ನಾಟಕಾ ಬರಿ ನಾಟಕ) ಇಲ್ಲಿ ಸೇರಿಸಿದ್ದಾರೆ. ನಾಟಕದ ಸೂತ್ರಧಾರನು ಮೃತ್ಯುದೇವತೆಯ ಪ್ರಾರ್ಥನೆಯನ್ನು ಮಾಡುವುದರ ಮೂಲಕ ನಾಟಕಕಾರನ ಉದ್ದೇಶ, ನಾಟಕದವಸ್ತು 'ಸಾವು' ಎಂಬುದನ್ನು ಓದುಗನ ಮನುಮುಟ್ಟಿಸುತ್ತಾನೆ. ನಾಂದಿಯಲ್ಲಿ ಸೂತ್ರಧಾರನು ಈ ನಾಟಕದಲ್ಲಿ ಮೂರು ಹೆಣಬೀಳುತ್ತದೆ ಅಷ್ಟರಲ್ಲೇ ತಾವೆಲ್ಲರೂ ಸಂತೋಷ ಪಡಬೇಕು. ಇಷ್ಟೇ ನಮ್ಮ ಭಿನ್ನಹ ಈ ಟ್ರ್ಯಾಜಿಡೀ ಮುಂದೆ ಶೇಕ್ಸ್‌ಪಿಯರನ ಟ್ರ್ಯಾಜಿಡಿ ಕೂಡಾ ಝುಕ್ಕಿಸಿ ಹೋಯಿತು.[೧೩] ಎನ್ನುತ್ತಾನೆ.

ಬೇಂದ್ರೆಯವರು ಈ ನಾಟಕದಲ್ಲಿ ದೊರೆ, ದಿವಾಣ, ಕಳ್ಳಿ, ಗೃಹಸ್ಥ, ಸೂಳೆ. ಸನ್ಯಾಸಿ– ಪಾತ್ರಗಳ ಮೂಲಕ ಅನೀತಿ, ಪಾಪ, ಪುಣ್ಯ ಭ್ರಷ್ಟಾಚಾರವೆಂಬ ಪೆಡಂಭೂತದ ಬಗೆಗೆ ಬೆಳಕು ಚೆಲ್ಲುತ್ತಾರೆ.

೧೯೩೪ರಲ್ಲಿ ಬೇಂದ್ರೆಯವರು 'ಜಾತ್ರೆ' ಎಂಬ ನಾಟಕವನ್ನು ಬರೆದರು. ಈ ನಾಟಕದ ವಸ್ತುವಿನ ಪ್ರೇರಣೆ ಕುರಿತು ಬೇಂದ್ರೆಯವರು "ಭಾರತೀಯ ರಾಷ್ಟ್ರೀಯ ಕಾಂಗ್ರೇಸ್ ಸ್ಥಾಪಿತವಾದಾಗ, ಅದರಲ್ಲಿ ಭಾರತೀಯತ್ವದ ಸಮಗ್ರತೆ ಸಾಕಷ್ಟಿತ್ತು. ಈಗ ಕಾಂಗ್ರೆಸ್ಸಿನ ತುಣುಕು ತುಣುಕಿನಲ್ಲಿಯೂ ಸಾಯುವ ಮತ್ತು ಕೊಲ್ಲುವ ಏರಾಟವಿದೆ. ಬದುಕಿನ ಜಾಣ್ಮೆಯ ತೂಕ ತೀರಕಡಿಮೆ"[೧೪] ಎಂದು ವಿಷಾದವನ್ನು ವ್ಯಕ್ತಪಡಿಸಿ ನಾಡಿನ ಜನರು ಮತ್ತು ಆಡಳಿತ ನಡೆಸುವವರು ಹೃದಯವಂತರಾಗಬೇಕು ಎಂದು ಆಶಿಸುತ್ತಾರೆ. ೧೯೩೬ರಲ್ಲಿ ಬೇಂದ್ರೆಯವರು ಹಳೆಯಗೆಣೆಯರು, 'ದೆವ್ವನಮನೆ' ಮತ್ತು 'ನಗೆಯ ಹೊಗೆ' ಎಂಬ ಮೂರು ನಾಟಕಗಳನ್ನು ಬರೆದರು.

ಬೇಂದ್ರೆಯವರು 'ಹಳೆಯಗೆಣೆಯರು' ನಾಟಕದ ಮೂಲಕ ಮಾನವನು ಅಂತರಂಗ ಮತ್ತು ಬಹಿರಂಗದಲ್ಲಿ ಒಂದೇ ತೆರನಾಗಿ ಇರಬೇಕು. ಇಲ್ಲವಾದರೆ ಅವನ ಮನಸ್ಸು ಹೇಗೆ ತೊಳಲಾಟದಲ್ಲಿ ಸಿಕ್ಕು ನರಳುತ್ತಾನೆ ಎಂಬ ಅಂಶದ ಕಡೆಗೆ ಬೆಳಕು ಚೆಲ್ಲಿದರೆ

---

೧೨. ದ.ರಾ.ಬೇಂದ್ರೆ : ತಿರುಕರ ಪಿಡುಗು (ಸಂಪಾದಕರ ನುಡಿ) ಪುಟ–೩

೧೩. ದ.ರಾ.ಬೇಂದ್ರೆ. ಸಾಯೋ ಆಟ. ಪುಟ–೧

೧೪. ದ.ರಾ.ಬೇಂದ್ರೆ : ಜಾತ್ರೆ.ಲೇಖಕರ ನುಡಿ.

'ದೆವ್ವನ ಮನೆ' ನಾಟಕದ ಮೂಲಕ "ಗಂಡು, ಹೆಣ್ಣು, ಒಂದನ್ನೊಂದು ಅರಿತು ಬಾಳಬೇಕು. ಅರಿತು ಬಾಳಿದರೆ ದೇವರ ಮನೆ, ಮರೆತು ಬಾಳಿದರೆ ದೆವ್ವನ ಮನೆ"[೧೫] ಎಂಬ ಸತ್ಯ ಸೂತ್ರವನ್ನು ಸಾರಿದರು. ಈ ಏಕಾಂಕ ನಾಟಕವು ಬೇಂದ್ರೆಯವರು ಹೇಳುವಂತೆ ಒಂದು 'ಧ್ವನಿಚಿತ್ರ'. ಇನ್ನು 'ನಗೆಯ ಹೊಗೆ' ನಾಟಕದ ಮೂಲಕ 'ಸಮಾಜದ ಕಠೋರ ಹಿಡಿತಕ್ಕೆ ಸಿಕ್ಕಿ ನಲುಗುವ ಒಂದು ಕುಟುಂಬ ಮತ್ತು ಅಲ್ಲಿ ಹೆಣ್ಣು ಬಲಿಪಶುವಾಗುವ ದುರಂತವನ್ನು ಚಿತ್ರಿಸಿದ್ದಾರೆ. ಎನ್ಕೆ ಕುಲಕರ್ಣಿಯವರು "ಬೇಂದ್ರೆಯವರ ಈ ನಾಟಕ ಬ್ರಾಹ್ಮಣ ಸಮಾಜದಲ್ಲಿ ಒಂದು ಬಿರುಗಾಳಿಯನ್ನೇ ಎಬ್ಬಿಸಿರಬೇಕು"[೧೬] ಎಂದು ಅಭಿಪ್ರಾಯ ಪಟ್ಟಿದ್ದಾರೆ.

೧೯೪೬ರಲ್ಲಿ ದ.ರಾ.ಬೇಂದ್ರೆಯವರು 'ಉದ್ಧಾರ' ಎಂಬ ನಾಟಕವನ್ನು ಬರೆದರು. ಶತಶತಮಾನಗಳಿಂದಲೂ ನಮ್ಮ ಸಮಾಜದಲ್ಲಿ ನಡೆಯುತ್ತಿರುವ ಶೋಷಣೆ, ದಬ್ಬಾಳಿಕೆ, ಅದಕ್ಕೆ ಗುರಿಯಾದ ಪಂಚಮರ ಉದ್ಧಾರ ಬಯಸುವಂತೆ ಕಾಣಿಸಿಕೊಳ್ಳುವ ವ್ಯಕ್ತಿಗಳ ಸ್ವಾರ್ಥದ ಚಿತ್ರಣವನ್ನು ಈ ನಾಟಕ ನೀಡಬಲ್ಲದು. ಸ್ವಾತಂತ್ರ್ಯ ಪೂರ್ವದಲ್ಲಿ ಬೇಂದ್ರೆಯವರು ಚಿತ್ರಿಸಿದ ಜಟಿಲವಾದ ಸಮಸ್ಯೆಗಳು ಇಂದಿಗೂ ಸಹ ಬಣ್ಣಗಳೆಯದೆ ಹೊಳೆಯುತ್ತಿರುವುದು ವಿಪರ್ಯಾಸವೇ ಸರಿ.

ಬೇಂದ್ರೆಯವರಿಂದ ೧೯೫೦ರಲ್ಲಿ ರಚನೆಯಾದ 'ಮಂದೀ ಮದಿವಿ', ಮತ್ತು 'ಮಂದೀ ಮಕ್ಕಳು' ಹಾಗೂ ೧೯೮೦ ರಲ್ಲಿ ರಚನೆಯಾದ ಅವರ ಕೊನೆಯ ಏಕಾಂಕ ನಾಟಕ 'ಮಂದೀ ಮನಿ' – ಎಂಬ ಮೂರು ನಾಟಕಗಳನ್ನು ಕೂಡಿಸಿ 'ಹೊಸ ಸಂಸಾರ' ಎಂಬ ನಾಟಕ ರೂಪ ತಳೆಯಿತು.

ಮೂರು ಅಂಕಗಳಿರುವ ಈ 'ಹೊಸ ಸಂಸಾರ' ನಾಟಕದಲ್ಲಿ ಪ್ರತಿಯೊಂದು ಅಂಕಗಳನ್ನು ಪ್ರತ್ಯೇಕವಾಗಿ ಓದಿದರೂ ಅವು ಸ್ವಯಂಪೂರ್ಣತೆಯನ್ನು ಹೊಂದಿವೆ. ಆದರೆ ನಾಟಕದ ವೈಶಿಷ್ಟತೆಯನ್ನು ಅರಿಯಬೇಕಾದರೆ ಮೂರು ಅಂಕಗಳನ್ನು ಓದಿದರೆ ಮಾತ್ರ ಸಾಧ್ಯ. "ದಾಂಪತ್ಯ ಇಜ್ಜೋಡಾಗಬಾರದು. ಸಂಸಾರ ಸಮನಾಗಿರಬೇಕು. ಸಮರಸವೇ ಜೀವನ–ಇವು ಬೇಂದ್ರೆ ಮಾತಿನ ಮುಕ್ತಾಫಲಗಳು.ಇದಕ್ಕಾಗೇ ಬೇಂದ್ರೆ 'ಹೊಸ ಸಂಸಾರ' ರಚಿಸಿದರು".[೧೭] ತಮ್ಮ ಊರಿನ ಮನೆ–ಮನೆಗೆ ತೆರಳಿ ಆ ಮನೆಯ ದಂಪತಿಗಳನ್ನು ಮುಂದೆ ಕೂಡಿಸಿಕೊಂಡು ಅವರ ಸುಖ–ದುಖಃಗಳನ್ನು ಆಲಿಸಿ, ಒಂದುಗೂಡಿಸುವ ಪ್ರವೃತ್ತಿಯಿದ್ದ ಬೇಂದ್ರೆಯವರಿಗೆ ಈ ನಾಟಕದ ರಚನೆ ಸುಲಭ ಸಾಧ್ಯವಾಗಿದ್ದೀತು.

ಬೇಂದ್ರೆಯವರು ೧೯೫೮ರಲ್ಲಿ 'ಶೋಧನಾ' ಎಂಬ ಹದಿನೈದು ಪುಟಗಳ ಏಕಾಂಕ ನಾಟಕವನ್ನು ರಚಿಸಿದರು. ಕಾಲಕ್ಕೆ ತಕ್ಕಂತೆ ಬದಲಾದ ಪದ್ಧತಿಗಳನ್ನು ಹಿರಿಯರು ತಿಳಿದು ಕೊಳ್ಳಬೇಕು ಅದರಂತೆ ಕಿರಿಯರಾದವರು ಸಹ ತಿಳುವಳಿಕೆಯುಳ್ಳವರಾಗಿರಬೇಕು ಎಂಬ ಆಶಯದೊಂದಿಗೆ ಇದು ರಚಿತವಾಗಿದೆ.

---

೧೫. ದ.ರಾ.ಬೇಂದ್ರೆ: ದೆವ್ವನ ಮನೆ, ಲೇಖಕರ ನುಡಿ ಪುಟ ೫,
೧೬. ಎನ್ಕೆ ಕುಲಕರ್ಣಿ: ಕನ್ನಡ ಸಾಹಿತ್ಯದಲ್ಲಿ ದ.ರಾ.ಬೇಂದ್ರೆಯವರ ಸ್ಥಾನಮಾನ. ಪುಟ–೧೩
೧೭. ಕನ್ನಡ ರಂಗಭೂಮಿ ನಡೆದು ಬಂದ ದಾರಿ–ಸಂ.ಡಾ.ಶ್ರೀರಂಗ. ಎನ್ಕೆ ಕುಲಕರ್ಣಿ–ಬೇಂದ್ರೆಯವರ ನಾಟಕಗಳು. ಪು–೨೯೧

೧೯೬೮ರಲ್ಲಿ 'ಆ ಥರಾ ಈ ಥರಾ' ಎಂಬ ವೈಚಾರಿಕ ನಾಟಕವನ್ನು ರಚಿಸಿದರು. ವಿವಾಹಿತ ಸ್ತ್ರೀಯರು ರಂಗದಮೇಲೆ ಅಭಿನಯಿಸಿಬೇಕೋ ಬೇಡವೊ ಎಂಬ ಸಮಸ್ಯೆಯನ್ನು ಚಿತ್ರಸುತ್ತಾ ಸ್ತ್ರೀಪುರುಷರು ನಾಟಕದಲ್ಲಿ ಪಾತ್ರವಹಿಸುವುದರಿಂದ ಅವರವರ ಜೀವನ ವಿಕಾಸವಾಗಬೇಕೇ ವಿನಃ ದುರಂತದತ್ತ ಸಾಗಬಾರದು ಎಂಬ ಸಂದೇಶನೀಡಿ "ಗೃಹಸ್ಥ ಧರ್ಮದ ಮೇಲ್ಮೆಗೆ ಸಂಬಂಧಿಸಿದ ತಮ್ಮ ಮೌಲಿಕ ವಿಚಾರಗಳನ್ನು ಸುಂದರವಾಗಿ ಮನಗಾಣಿಸುವ ರೀತಿಯಲ್ಲಿ ಮಂಡಿಸಿದ್ದಾರೆ".[೧೮]

ಬೇಂದ್ರೆಯವರು ರಚಿಸಿದ ಹದಿಮೂರನೇ ನಾಟಕವಾದ 'ಮಕ್ಕಳು ಅಡಿಗೀ ಮನೆ ಹೊಕ್ಕರೆ'ಯು ಮಕ್ಕಳಿಗಾಗಿಯೇ ರಚನೆ ಮಾಡಿದ ಒಂದು ಚಿಕ್ಕನಾಟಕ. "ಕುಟುಂಬ ಜೀವನದಲ್ಲಿ ಮಕ್ಕಳಿಗೆ ಮಹತ್ವದ ಸ್ಥಾನವಿದೆ. ಆದರೆ ಅವರ ಆ ಸ್ಥಾನವನ್ನು ಅತಿಕ್ರಮಿಸಿದರೆ. ಆ ಅತಿಕ್ರಮವು ಸಾಮಾಜಿಕ ವ್ಯವಸ್ಥೆಯ ಮೇಲೆ ಪರಿಣಾಮ ಬೀರಬಲ್ಲದೆಂಬ ಒಂದು ಆತಂಕ ಈ ನಾಟಕದ ಹಿಂದೆ ಮಿಡಿಯುತ್ತದೆ"[೧೯]

ಬೇಂದ್ರೆಯವರು ರಚಿಸಿದ ಹದಿನಾಲ್ಕನೆಯ ನಾಟಕ 'ಮಂದೀ ಮನಿ' ಇದು ೧೯೫೦ರಲ್ಲಿ ರಚಿಸಿದ 'ಹೊಸ ಸಂಸಾರ' ನಾಟಕದ ಮೂರನೆಯ ಅಂಕ. ಇದು ಹೊಸ ಸಂಸಾರ ನಾಟಕದಲ್ಲಿ ಬರುವ ಮೊದಲ ಎರಡು ಅಂಕಗಳ ಮುಂದುವರಿಕೆಯೇ ಆಗಿದೆ. ಈ ಕೌಟುಂಬಿಕ ನಾಟಕವು ತಲೆಮಾರುಗಳ ನಡುವಿನಅಂತರ, ಅಲ್ಲಿ ಉಂಟಾಗುವ ಸಮಸ್ಯೆಗಳನ್ನು ಶಾಂತಿಯಿಂದ ಬಿಡಿಸಿ ಸಂಸಾರದಲ್ಲಿ ಹೊಂದಾಣಿಕೆಯಿಂದ ಬಾಳಬೇಕೆಂಬ ಅಗತ್ಯತೆಯನ್ನು ಒತ್ತಿಹೇಳುತ್ತದೆ.

೧೯೫೧ರಲ್ಲಿ ಬೇಂದ್ರೆಯವರ ಈ ವರೆಗಿನ ಹದಿನಾಲ್ಕು ನಾಟಕಗಳ ಬೃಹತ್ ಸಂಪುಟವೊಂದು ಪ್ರಕಟವಾಯಿತು. ಇದು ನಮ್ಮ ರಂಗಭೂಮಿಯ ಶತಮಾನೋತ್ಸವಕ್ಕೆ ಸಲ್ಲುವ ಅನರ್ಘ್ಯರತ್ನದಂತಹ ಕಾಣಿಕೆಯಾಯಿತು.

ದ.ರಾ.ಬೇಂದ್ರೆಯವರು ವೃತ್ತಿರಂಗಭೂಮಿಗಾಗಿ ರಚಿಸಿದ್ದು ಎರಡೇ ನಾಟಕ ಕೃತಿಗಳು. ಮೊದಲನೆಯದು 'ಪ್ರತಿಮಾಗೃಹ' ಮತ್ತೊಂದು 'ತಲೆದಂಡ'. ಮಹಾ ನಾಟಕರಾರನೆಂದು ಗುರುತಿಸಲ್ಪಟ್ಟಿರುವ ಭಾಸ ವಿರಚಿತ ಪ್ರತಿಮಾ ನಾಟಕವು ಭಾರತೀಯ ಸಾಹಿತ್ಯದ ಅಮೂಲ್ಯ ಕೃತಿರತ್ನ. ಈ ನಾಟಕದ ಅನುವಾದವನ್ನು ಅನೇಕ ಪಂಡಿತರು ಮಾಡಿದ್ದಾರೆ. ಬೇಂದ್ರೆಯವರ 'ಪ್ರತಿಮಾಗೃಹ'ವು ಇವೆಲ್ಲಕ್ಕಿಂತ ವಿಭಿನ್ನವಾಗಿದೆ. "ಮೂಲಕ್ಕಿಂತ ಹೊಸ ಪಾತ್ರಗಳ, ದೃಶ್ಯಗಳಸೃಷ್ಟಿ ಇಲ್ಲಿದೆ. ಇದು ಪ್ರತಿಮಾನಾಟಕದ ಅನುವಾದವಲ್ಲ. ಪುನರ್‌ಸೃಷ್ಟಿ! ಮೂಲ ನಾಟಕದಲ್ಲಿ ಇಲ್ಲದ ಕಾರ್ಯಕಾರಣಗಳನ್ನು ಕಲ್ಪಿಸಿ, ಹೊಸ ಸನ್ನಿವೇಶಗಳನ್ನು ನಿರ್ಮಿಸಿ ಪ್ರತಿ ಪಾತ್ರದ ಹಿರಿಮೆಯನ್ನು ತೋರಿಸಿದ್ದು ಈ ಕೃತಿಯ ವೈಶಿಷ್ಟ್ಯ[೨೦]

---

೧೮. ದ.ರಾ.ಬೇಂದ್ರೆ–ಶೋಭನಾ–ಬೆನ್ನುಡಿ.
೧೯. ದ.ರಾ.ಬೇಂದ್ರೆ; ಮಕ್ಕಳು ಅಡಿಗೀ ಮನೆ ಹೊಕ್ಕರೆ.ಮುನ್ನುಡಿ.ಕುರ್ತಕೋಟಿ.
೨೦. ಸಂಪಾದಕರು : ದ.ರಾ.ಬೇಂದ್ರೆ ವೃತ್ತಿರಂಗಕೃತಿಗಳು ಭಾಗ–೨. ಪುಟ–೨

‘ತಲೆದಂಡ’ ಎಂಬ ಪದ ಕರ್ಣಸ್ಪರ್ಶವಾದೊಡನೆ ಕನ್ನಡದ ಸಹೃದಯ ಓದುಗರ ಸ್ಮೃತಿಪಟಲದಲ್ಲಿ ಮೂಡುವುದು ಬಸವಣ್ಣ-ಬಿಜ್ಜಳ ಮತ್ತು ಗಿರೀಶ ಕಾರ್ನಾಡರ ಹೆಸರು. ಆದರೆ ಇದಕ್ಕಿಂತ ಅರ್ಧ ಶತಮಾನದ ಹಿಂದೆಯೇ ವರಕವಿ ಬೇಂದ್ರೆಯವರು, ‘ಬಿಜ್ಜಳ - ಬಸವಣ್ಣ’ರನ್ನು ಕೇಂದ್ರವಾಗಿರಿಸಿಕೊಂಡು ‘ತಲೆದಂಡ’ ಎಂಬ ರಂಗಕೃತಿಯನ್ನು ರಚಿಸಿದ್ದರು. ಕ್ರಿ.ಶ.೧೯೪೩ರಲ್ಲಿ ಈ ಕೃತಿ ರಚನೆಯಾಗಿತ್ತಾದರೂ ಈ ನಾಟಕದ ಹಸ್ತಪ್ರತಿಯು ಅರವತ್ತೇಳು ವರ್ಷಗಳ ನಂತರ ಲಭ್ಯವಾಗಿ ೨೦೦೯ರಲ್ಲಿ ಪ್ರಥಮ ಮುದ್ರಣವಾಯಿತು. ಭಕ್ತಿಭಂಡಾರಿ ಬಸವಣ್ಣನವರ ಜೀವನೋದ್ದೇಶವನ್ನು ಬಿಂಬಿಸುವ ಈ ಅನನ್ಯ ಕೃತಿಯು ಹರಿಹರನ ಬಸವರಾಜದೇವರ ರಗಳೆಯನ್ನು ಆಕರವಾಗಿರಿಸಿಕೊಂಡು ಭರತನ ನಾಟ್ಯಶಾಸ್ತ್ರದ ಪಂಚ ಸಂಧಿಗಳ ಲಕ್ಷಣಗಳನ್ನಾಧರಿಸಿ ಸೃಷ್ಟಿಯಾಗಿದೆ.

# ಅಧ್ಯಾಯ-೬

# .ರಾ.ಬೇಂದ್ರೆ ವಿರಚಿತ ತಲೆದಂಡ

# ಾಟಕ-ಒಂದು ಅಧ್ಯಯನ

೧. ನಾಟಕದ ಶೀರ್ಷಿಕೆ 'ತಲೆದಂಡ'-ಒಂದು ಕಿರುನೋಟ

೨. ತಲೆದಂಡ ನಾಟಕದ ಕಥಾಬೀಜ

೩. ತಲೆದಂಡ ನಾಟಕದ ವಸ್ತು ವಿಶ್ಲೇಷಣೆ

೪. ನವರಸಗಳ ಆಧಾರದ ಮೇಲೆ ತಲೆದಂಡ ನಾಟಕದ ವಿಶ್ಲೇಷಣೆ

# ಅಧ್ಯಾಯ-೬

## ದ.ರಾ. ಬೇಂದ್ರೆ ವಿರಚಿತ 'ತಲೆದಂಡ' ನಾಟಕ – ಒಂದು ಅಧ್ಯಯನ

ವಿಶ್ವದ ಸಾಮಾಜಿಕ ಇತಿಹಾಸದಲ್ಲಿ ಹಲವು ಅದಮ್ಯಚೇತನಗಳು ಆಗಿಹೋಗಿವೆ. ಸಾಮಾಜಿಕ ವ್ಯವಸ್ಥೆ ಜಡತ್ವಹೊಂದಿ ಸಂಪ್ರದಾಯದ ಸಂದಿಗ್ಧದಲ್ಲಿ ನರಳುವಂತಹ ಸನ್ನಿವೇಶ ನಿರ್ಮಾಣವಾದಾಗ ಅನೇಕ ಸುಧಾರಕರು ಉದಿಸಿ, ಸಮಾಜಸುಧಾರಣೆ ಮಾಡುತ್ತ ಬಂದಿದ್ದಾರೆ. ಭಾರತೀಯಸಂದರ್ಭದಲ್ಲಿ ಸುಮಾರು ಎರಡುಸಾವಿರದ ಐದುನೂರು ವರ್ಷಗಳ ಹಿಂದೆಯೇ ಸಮಾಜ ಸುಧಾರಣೆಗೆ ಭದ್ರ ತಳಹದಿಯನ್ನು ಹಾಕಿಕೊಟ್ಟು, ಜನಸಮುದಾಯವನ್ನು ವೈಚಾರಿಕ ಜ್ಞಾನದ ಜ್ಯೋತಿಯೆಡೆಗೆ ಕೊಂಡೊಯ್ಯುವ ಪ್ರಯತ್ನದಲ್ಲಿ ಮೊದಲ ಹೆಜ್ಜೆ ಇಟ್ಟವರೆಂದರೆ ಮಹಾನ್ ಮಾನವತಾವಾದಿ ಭಗವಾನ್ ಬುದ್ಧ. ಬುದ್ಧ ಹಚ್ಚಿಟ್ಟ ವೈಚಾರಿಕತೆಯ ಹಣತೆಯು ೧೨ನೇ ಶತಮಾನದಲ್ಲಿ ಅವತರಿಸಿದ ಯುಗಪ್ರವರ್ತಕ, ಭಕ್ತಿ ಭಂಡಾರಿ, ಮಹಾ ಅನುಭಾವಿ, ಧರ್ಮಪ್ರವರ್ತಕ, ದಾರ್ಶನಿಕ, ವಿಚಾರವಾದಿ ಬಸವಣ್ಣನಿಂದ ಜಾಜ್ವಲ್ಯಮಾನವಾಗಿ ಕಂಗೊಳಿಸಿತು.



ಇಂತಹ ಬಸವಣ್ಣನು ಕಟ್ಟಬಯಸಿದ ಸಮತೆ-ಸಮಾನತೆ-ಮಮತೆಯ ಸಮಾಜವನ್ನು ಕಾಣಬಯಸಿದವರಲ್ಲಿ ವರಕವಿ ದ.ರಾ.ಬೇಂದ್ರೆಯವರು ಪ್ರಮುಖರು. "ಬಸವಣ್ಣ ಜಗದ್ವಿಲಕ್ಷಣ ಮೂರ್ತಿ, ಕರ್ನಾಟಕದ ಇತಿಹಾಸದಲ್ಲಿ ಇವನಂಥವ ಇವನೊಬ್ಬನೆ...ಶಂಕರ ವಿದ್ಯಾರಣ್ಯರು ಹೋಗಲಿ, ಸರ್ವಜ್ಞ, ಪುರಂದರದಾಸರು ಅಷ್ಟೇ ಏಕೆ? ವ್ಯಾಸ, ವಾಲ್ಮೀಕಿಗಳ ರಾಮಾಯಣ, ಮಹಾಭಾರತಗಳಲ್ಲೂ ಸ್ವಂತದ ಜೀವನಾನುಭವದ ಉಕ್ತಿಗಳನ್ನು ಹೆಕ್ಕಿ ತೆಗೆಯಬೇಕಾದೀತು. ಬಸವಣ್ಣನ ಜೀವನವೇ ಸಾಹಿತ್ಯ, ಸಾಹಿತ್ಯವೇ ಜೀವನ"[೧] ಎನ್ನುವ ವರಕವಿ ಬೇಂದ್ರೆಯವರ ಮಾತು ಆ ಮಹಾಚೇತನದ ಬದುಕಿನ ಚಿತ್ರಕ್ಕೆ ಹಾಕಿದ ಸುವರ್ಣ ಚೌಕಟ್ಟು ಎಂದರೆ ಉತ್ಪ್ರೇಕ್ಷೆಯಾಗಲಾರದು.

ಬೇಂದ್ರೆಯವರು ಬಸವಣ್ಣನಿಂದ ಕರ್ನಾಟಕ, ಭಾರತ,ವಿಶ್ವ ಪಡೆದದ್ದೇನು? ಎಂಬುದರ ಬಗ್ಗೆ ೧೯೨೦ ರಿಂದ ೧೯೬೮ರವರೆಗೆ, ಸುಮಾರು ನಲವತ್ತೆಂಟು ವರ್ಷ ಹಾಗೂ ಅನಂತರವೂ ಚಿಂತಿಸುತ್ತಲೇ ಇದ್ದರು. ಬಸವಣ್ಣನ ಜೀವನವನ್ನಾಧರಿಸಿ ವಾರ್ಧಕ ಷಟ್ಪದಿಯಲ್ಲಿ ಬಂದು ಖಂಡಕಾವ್ಯ ಬರೆಯುವ ಯೋಚನೆ ಮಾಡಿದ್ದರು. ಈ ನಿಟ್ಟಿನಲ್ಲಿ ರಚನೆಯಾದ 'ಬಸವ ಬಯಲಾದ' ಎಂಬ ಕವನವನ್ನು 'ಶತಮಾನ' ಕವನ ಸಂಗ್ರಹದಲ್ಲಿ ಓದಬಹುದು. ೧೯೩೭ರ ಹಿಂದು ಮುಂದು ಬಸವಣ್ಣನವರ ಜೀವನಕ್ಕೆ ಗದ್ಯ ನಾಟಕದ ರೂಪ ಕೊಡಬೇಕು ಎಂದು ಯೋಚಿಸಿದರು. ಅದಕ್ಕೆ 'ತಲೆದಂಡ' ಎಂಬ ನಾಮಕರಣವನ್ನು ಮಾಡಿ ಅದನ್ನು ಕುರಿತು ಹಲವಾರು ಸ್ನೇಹಿತ ಮಂಡಳಿಗಳಲ್ಲಿ ಮಾತನಾಡಿದ್ದರು."[೨] ಆದರೆ ಕುಟುಂಬದಲ್ಲಾಗುತ್ತಿದ್ದ 'ಸಾವು'ಗಳಿಂದ ನೊಂದ ಅವರ ಉಪಜೀವನವೇ ಅಸ್ತವ್ಯಸ್ತವಾಗ

---

೧. ದ.ರಾ.ಬೇಂದ್ರೆ "ಸಾಹಿತ್ಯದ ವಿರಾಟ್ ಸ್ವರೂಪ" ಪುಟ ೪೫೭

೨. ಡಾ॥ ವಾಮನ ಬೇಂದ್ರೆ "ಸಂಪಾದಕರ ನುಡಿ-ತಲೆದಂಡ. ಪುಟ ೫೬

ತೊಡಗಿದ್ದರಿಂದ ನಾಟಕರಚನೆ ಹಿಂದೆಬಿದ್ದಿತು. ಆದರೂ ಸಹ ನಾಟಕದ ಹಿನ್ನಲೆ ಗೀತೆಗಾಗಿ 'ತುಂಬಿ ಬಂದಿತ್ತು' ಎಂಬ ಕವನವನ್ನು ರಚಿಸಿದ್ದರು. (೧೯೩೭ರಲ್ಲಿ 'ಸಖೀಗೀತ' ಕವನ ಸಂಗ್ರಹದಲ್ಲಿ ಈ ಕವನ ಸೇರ್ಪಡೆಯಾಗಿದೆ.)

೧೨ನೆಯ ಶತಮಾನದಲ್ಲಿ ಬಸವಣ್ಣನಿಂದುಂಟಾದ ಶರಣ ಚಳುವಳಿಯ ವಸ್ತುವನ್ನು ಕೇಂದ್ರವಾಗಿರಿಸಿಕೊಂಡು ೧೩ನೆಯಶತಮಾನದ ಹರಿಹರನಿಂದ ಪ್ರಾರಂಭವಾಗಿ ಇಂದಿನವರೆಗೂ ಸಾಕಷ್ಟು ಕಥೆ–ಕಾವ್ಯ–ಕಾದಂಬರಿ–ನಾಟಕಗಳು ಮೂಡಿಬಂದಿವೆ. ಕೇವಲ ನಾಟಕ ಪ್ರಬೇಧವನ್ನಷ್ಟೆ ಲಕ್ಷಿಸಿದರೆ ೧೯೧೧ರಲ್ಲಿ ಬೆಳಗಾವಿಯ ಹಿರೇಮಠ ಲಿಂಗಸೂಗೂರು ಅಮರಶಾಸ್ತ್ರಿಗಳು ಬರೆದಿರುವ 'ಸಂಗೀತ ಬಸವೇಶ್ವರ ನಾಟಕ' ದಿಂದ ಮೊದಲುಗೊಂಡು ಅ.ನ.ಕೃ(ಜಗಜ್ಯೋತಿ ಬಸವೇಶ್ವರ–೧೯೪೯) ಗೋ.ರು. ಚನ್ನಬಸಪ್ಪ (ಜಗಜ್ಯೋತಿ ಬಸವೇಶ್ವರ –೧೯೫೬) ಸಿದ್ಧಯ್ಯ ಪುರಾಣಿಕ (ಆತ್ಮಾರ್ಪಣ –೧೯೪೨), ಬೆಳ್ಳಾವೆ ನರಹರಿ ಶಾಸ್ತ್ರಿ (ಮಹಾತ್ಮ ಬಸವೇಶ್ವರ–೧೯೫೧), ಎಂ.ಎಂ. ಕಲಬುರ್ಗಿ (ಕೆಟ್ಟಿತ್ತು ಕಲ್ಯಾಣ–೧೯೫೩), ಪಿ. ಲಂಕೇಶ (ಸಂಕ್ರಾಂತಿ–೧೯೮೫), ಎಚ್.ಎಸ್.ಶಿವಪ್ರಕಾಶ್(ಮಹಾಚೈತ್ರ–೧೯೬೮), ಗಿರೀಶ್ ಕಾರ್ನಾಡ್(ತಲೆದಂಡ–೧೯೯೦) ಚಂದ್ರಶೇಖರ ಕಂಬಾರ(ಶಿವರಾತ್ರಿ–೨೦೧೧) ಮುಂತಾದ ನೂರಾರು ನಾಟಕಗಳು ರಚನೆಯಾಗಿವೆ.

ಈ ಎಲ್ಲಾ ಕೃತಿರತ್ನಗಳ ನಡುವೆಯೂ ದ.ರಾ.ಬೇಂದ್ರೆಯವರು ರಚಿಸಲು ಬಯಸಿದ್ದ, 'ತಲೆದಂಡ' ನಾಟಕದ ವಸ್ತುವಿನ ಬಗೆಗೆ ಸಾಹಿತ್ಯಲೋಕದಲ್ಲಿ ಒಂದು ಬಗೆಯ ದಿವ್ಯ ಕುತೂಹಲವೂ, ಛೆ! ಬರೆಯಲಿಲ್ಲವಲ್ಲ! ಎಂಬ ನಿರಾಶೆಯೂ ಸುಳಿಯುತ್ತಿತ್ತು. ಬೇಂದ್ರೆಯವರು ಧಾರವಾಡವನ್ನು ಬಿಡುವಮುನ್ನ ತಮ್ಮ ಆಪ್ತರಲ್ಲಿ "ಆಯಿತು ನನ್ನ ಕಾವ್ಯ, ಲೇಖನಿ ನನ್ನ 'ಶ್ರೀಮಾತಾ'ದಲ್ಲೇ ಬಿಟ್ಟು ಹೋಗ್ತಾ ಇದ್ದೀನಿ, ನನ್ನ ಅಪ್ರಕಟಿತ ಕವನಗಳೆಲ್ಲಾ ಗ್ರಂಥಗಳ ಗರ್ಭದಾಗ, ಚೀಟಿ ಕವರ್, ಪುಸ್ತಕಗಳ ಮಾರ್ಜಿನ್‌ನಲ್ಲಿ ಮೂಡ್ಯಾವ, ಅವನ್ನೆಲ್ಲ ಕೂಡಸ್ರಿ"[೩] ಎಂದು ಹೇಳಿದ್ದರು.

ಈ ನಿಟ್ಟಿನಲ್ಲಿ ಆದ ಪ್ರಯತ್ನದ ಫಲವೋ ಎಂಬಂತೆ ಅರವತ್ತೇಳು ವರ್ಷಗಳ ನಂತರ (೧೯೪೧–೨೦೦೮) ಬೇಂದ್ರೆಯವರ 'ತಲೆದಂಡ' ನಾಟಕದ ಹಸ್ತಪ್ರತಿ ಲಭ್ಯವಾಗಿದ್ದು, ಇದು ವೃತ್ತಿ ರಂಗಭೂಮಿಗಾಗಿಯೇ ಬರೆಯಲಾಗಿದೆ.

"ಬಸವಣ್ಣ ಅವತಾರಿ ಪುರುಷನೋ? ಸಂಸಾರಿಯೋ? ಭಕ್ತಿ ಸಂಪ್ರದಾಯಕ್ಕೆ ತಳಹದಿ ಹಾಕಿಕೊಟ್ಟ ಮಹಾಪುರುಷನೋ? ರಾಜಕೀಯ ಮಂತ್ರಿಯೋ? ಎಂಬುದು

---

೩. ಎನ್ಕೆ ಕುಲಕರ್ಣಿ, ಧಾರವಾಡದ ದತ್ತೂಮಾಸ್ತರ, ಪುಟ ೫೫

೧೯೪೦ರ ಪೂರ್ವದಲ್ಲಿ ಚರ್ಚೆ ಆಗಿ 'ಭಕ್ತಿ ಭಂಡಾರಿ ಬಸವಣ್ಣ' ಎಂಬುದರ ಕಡೆಗೇ ಒಲವಿತ್ತು. ಯುಗದಕವಿ–ಹರಿಹರ ರಚಿಸಿದ ಬಸವರಾಜದೇವರ ರಗಳೆಯು ಬಸವಣ್ಣನವರ ಜನನದ ಉದ್ದೇಶ ಹಾಗೂ ಕಾರ್ಯವನ್ನು ಸರಿಯಾಗಿ ಗ್ರಹಿಸಿತು. ಜಗದ ಕವಿಯಾದ ಬೇಂದ್ರೆಯವರ 'ತಲೆದಂಡ' ಎಂಬ ಕಂಪನಿ ನಾಟಕದ ಹಸ್ತಪ್ರತಿಗೆ ಮೂಲ ಆಕರ ಹರಿಹರ ರಚಿತ ರಗಳೆ. ಬಸವಣ್ಣನವರ ಚರಿತ್ರ ಹಾಗೂ ಚಾರಿತ್ರ್ಯಕ್ಕೆ ಕಾರ್ಯಕಾರಣ ಸಂಬಂಧ ಜೋಡಿಸಿ ಘನವ್ಯಕ್ತಿತ್ವಕ್ಕೆ ಬೇಂದ್ರೆ ರೂಪಕೊಟ್ಟರು. ಆದುದರಿಂದ ಹರಿಹರ ಕವಿಯ ಮಾನದಂಡಗಳಿಂದಲೇ ಬೇಂದ್ರೆಯವರ 'ತಲೆದಂಡ' ನಾಟಕದ ವಿಮರ್ಶೆ ಮಾಡುವುದು ಯುಕ್ತ"[೪].

ಬೇಂದ್ರೆಯವರು ವೃತ್ತಿ ರಂಗಭೂಮಿಯ ದೃಷ್ಟಿಯಿಂದಲೇ ಬರೆದ 'ತಲೆದಂಡ' ನಾಟಕವು ಒಟ್ಟು ೫೩ ದೃಶ್ಯಗಳ, ನಾಲ್ಕು ಭಾಗವನ್ನೊಳಗೊಂಡಿದೆ. ೧ನೇ ಭಾಗದಲ್ಲಿ ೧ ರಿಂದ ೧೩ನೇ ದೃಶ್ಯ, ೨ನೇ ಭಾಗದಲ್ಲಿ ೧೪ ರಿಂದ ೨೨ನೇ ದೃಶ್ಯ, ೩ನೇ ಭಾಗದಲ್ಲಿ ೨೩ ರಿಂದ ೩೮ನೆಯ ದೃಶ್ಯ, ಹಾಗೂ ೪ ನೇಭಾಗದಲ್ಲಿ ೩೯ ರಿಂದ ೫೩ನೆಯ ದೃಶ್ಯವಾಗಿ ನಾಟಕವು ವಿಭಜನೆಗೊಂಡಿದೆ. ಈ ರಂಗಕೃತಿಯ ಕೆಲವು ದೃಶ್ಯಗಳು ನಾಟಕದ ಬಗ್ಗೆ ಬೇಂದ್ರೆ ಕಂಡ ಕನಸಿನ 'ನೀಲಿನಕಾಶೆ'ಯಂತೆ ಗದ್ಯರೂಪದಲ್ಲೇ ಉಳಿದಿದ್ದು ಸಂದರ್ಭಕ್ಕೆ ಅನುಸರಿಸಿ ಬೇಕಾಗುವ ಸಂಭಾಷಣೆಯನ್ನು ದಿಗ್ದರ್ಶಕರು ಸೃಷ್ಟಿಸಿಕೊಂಡು ಅಭಿನಯಿಸುವ ಅವಕಾಶವನ್ನು ಮುಕ್ತವಾಗಿರಿಸಿದ್ದಾರೆ.

**ನಾಟಕದ ಶೀರ್ಷಿಕೆ 'ತಲೆದಂಡ' : ಒಂದು ಕಿರುನೋಟ**

'ತಲೆದಂಡ' ಎಂಬ ಪದ ಕರ್ಣಸ್ಪರ್ಶವಾದೊಡನೆ ಕನ್ನಡದ ಸಹೃದಯ ಓದುಗರ ಸ್ಮೃತಿ ಪಟಲದಲ್ಲಿ ಮೂಡುವುದು ಬಸವ–ಬಿಜ್ಜಳ ಮತ್ತು ಗಿರೀಶ್ ಕಾರ್ನಾಡರ ಹೆಸರು. ಆದರೆ ಅರ್ಧ ಶತಮಾನದ ಹಿಂದೆಯೇ ವರಕವಿ ಬೇಂದ್ರೆಯವರು ಬಸವಣ್ಣನ ಆತ್ಮಗುಣಕ್ಕೆ ಒಲಿದು ಆತನನ್ನು ಅವತಾರೀಪುರುಷನಂತೆ ಚಿತ್ರಿಸಿ 'ತಲೆದಂಡ' ಎಂಬ ನಾಟಕವನ್ನು ಬರೆದಿದ್ದರೆಂದರೆ ಕ್ಷಣಕಾಲ ಆಶ್ಚರ್ಯವಾಗದೇ ಇರದು.

'ತಲೆದಂಡ' ಪದವು ಬಸವಣ್ಣನ–'ಬೇಡಿಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲ ಸಂಗಯ್ಯ ಅವಧಾರ' ಎಂಬ ವಚನದ ಮೂಲದಿಂದ ಪ್ರಥಮವಾಗಿ ಗುರುತಿಸಬಹುದಾಗಿದೆ. ತನ್ನಲ್ಲಿ ಬೇಡಿ ಬಂದವರಿಗೆ ಬೇಡಿದುದನ್ನು ಕೊಡಲಾಗದಿದ್ದರೆ ತಾನು ತನ್ನ ಪ್ರಾಣವನ್ನೇ ಅರ್ಪಿಸುತ್ತೇನೆ ಎಂಬ ಸಾರವನ್ನುಳ್ಳ ಈ ವಚನಪಾಲನೆಯನ್ನು ಪರೀಕ್ಷಿಸಲು ಕಳಿಂಗ ದೇಶದ ಮಹದೇವಿಸೆಟ್ಟಿಯೆಂಬುವವನು ಬಸವಣ್ಣನಲ್ಲಿ ಅಪಾರವಾದ

---

೩. ಡಾ॥ವಾಮಬೇಂದ್ರೆ, ಸಂಪಾದಕರ ನುಡಿ. ತಲೆದಂಡ–ಪುಟ ೫೭,೫೮

ಮಾಣಿಕ್ಯ, ಮುತ್ತು ಕೇಳಲು ಬಂದು ಆತನ ದಿವ್ಯಪ್ರಭೆಗೆ ಮರುಳಾಗಿ ಜೋಳ, ಕಡಲೆಯನ್ನು ಬೇಡುವ ಪ್ರಸಂಗವು ಹರಿಹರನ ಬಸವರಾಜದೇವರ ರಗಳೆಯಲ್ಲಿ ವರ್ಣಿತವಾಗಿದೆ.

"ಜಾಗೃತ ಸ್ವಪ್ನ ಸುಷುಪ್ತಿಯಲ್ಲಿ
ಮತ್ತೊಂದು ನೆನೆದಡೆ ತಲೆದಂಡ, ತಲೆದಂಡ
ಹುಸಿಯಾದಡೆ, ದೇವ ತಲೆದಂಡ, ತಲೆದಂಡ
ಕೂಡಲಸಂಗಮದೇವಾ
ನೀವಲ್ಲದೆ ಅನ್ಯವ ನೆನೆದಡೆ ತಲೆದಂಡ ತಲೆದಂಡ"

ಎಂಬ ವಚನದಲ್ಲಿ ಬಸವಣ್ಣನ 'ಏಕೇಶ್ವರವಾದ ಮತ್ತು ಅದನ್ನು ತಪ್ಪಿ ನಡೆಯ ಬೇಕಾದಂತಹ ಪರಿಸ್ಥಿತಿ ಒದಗಿದರೆ ಶಿವನಿಗೆ ತನ್ನ ಪ್ರಾಣವನ್ನೇ (ತಲೆದಂಡ) ಅರ್ಪಿಸುತ್ತೇನೆ ಎಂಬ ಅಚಲ ಭಕ್ತಿಯನ್ನು ಮನಗಾಣಬಹುದು.

ಸ್ವತಃ ಬಿಜ್ಜಳನ ಆಸ್ಥಾನದ ಮಂತ್ರಿಯಾಗಿದ್ದರೂ ಸಹ ಶಿವನಿಗಲ್ಲದೆ ಮತ್ತೆ ಯಾರಿಗೂ ತನ್ನ ತಲೆಯನ್ನು ಬಾಗುವುದಿಲ್ಲವೆಂದು ಬಸವಣ್ಣನು

"ನಿಮಗೆತ್ತಿದ ಕರವ ಅನ್ಯರಿಗೆ ಮುಗಿದಡೆ
ಅಘೋರ ನರಕವಯ್ಯ
ಈ ಭಾಷೆಗೆ ತಪ್ಪಿದೆಡೆ ತಲೆದಂಡ ತಲೆದಂಡ
ಅಳವರಿಯದೆ ನುಡಿದೆನು, ಕಡೆ ಮುಟ್ಟ ನಡೆಸಯ್ಯ
ಪ್ರಭುವೆ ಕೂಡಲ ಸಂಗಮದೇವಾ"

ಎಂದು ಘೋಷಿಸಿದರು. ಈ ವಚನಗಳನ್ನಾಧರಿಸಿ ಬೇಂದ್ರೆಯವರು ಬಸವಣ್ಣನ ಅವತಾರಿಗುಣವನ್ನು ಸಾರುವ ನಾಟಕಕ್ಕೆ 'ತಲೆದಂಡ' ಎಂದು ನಾಮಕರಣ ಮಾಡಿರಬಹುದು. ಹರಳಯ್ಯ-ಮಧುವರಸರ ಮಕ್ಕಳ ವೈವಾಹಿಕ ಸಂಬಂಧದ ಸಮಯದಲ್ಲಿ ಬಸವಣ್ಣನು ಮುಂದೆ ಆಗಬಹುದಾದ ದುರ್ಘಟನೆಯನ್ನು ನೆನೆದು ಕೂಡಲಸಂಗಮದಲ್ಲಿ ಶಿವನನ್ನು ನೆನೆಯುತ್ತಾ ಐಕ್ಯವಾಗಿ ತನ್ನದೇವನಿಗೆ ಪ್ರಾಣಾರ್ಪಣೆ ಮಾಡುವಂತೆ ದೃಶ್ಯೀಕರಿಸಿರುವುದರಿಂದ 'ತಲೆದಂಡ' ಎಂಬ ಶೀರ್ಷಿಕೆಯು ಈ ನಾಟಕಕ್ಕೆ ಸೂಕ್ತವಾಗಿ ಹೊಂದುತ್ತದೆ.

ಸ್ವತಃ ಗಿರೀಶ್ ಕಾರ್ನಾಡರೇ ಸ್ಪಷ್ಟ ಪಡಿಸುವಂತೆ "ತಲೆದಂಡ ಪದ ಬಸವಣ್ಣನವರ ವಚನದಿಂದ ಬಂದದ್ದಾದರೂ ನನಗೆ ನಾಟಕದ ಹೆಸರಾಗಿ ದೊರೆತದ್ದು ದ.ರಾ.ಬೇಂದ್ರೆ ಅವರಿಂದ. ಸುಮಾರು ಐವತ್ತು ವರ್ಷಗಳ ಹಿಂದೆ (ಕಾರ್ನಾಡರ ಕೃತಿ ಬಿಡುಗಡೆಯಾದದ್ದು ೧೫ನೇ ಆಗಸ್ಟ್ ೧೯೯೦) ಅವರು ಬಸವಣ್ಣ-ಬಿಜ್ಜಳರ ಯುಗವನ್ನು ಕುರಿತು ಈ ಹೆಸರಿನ ನಾಟಕವನ್ನು ಬರೆಯುವ ಹೊಳಹು ಹಾಕಿದ್ದರಂತೆ ಆದರೆ ಬರೆಯಲಿಲ್ಲ."[೪] ಎಂದು

---

೪. ಗಿರೀಶ್ ಕಾರ್ನಾಡ್ – 'ಲೇಖಕನ ನುಡಿ'–ತಲೆದಂಡ.

ಸ್ಮರಿಸಿದ್ದಾರೆ. ಬೇಂದ್ರೆಯವರ 'ತಲೆದಂಡ' ಶೀರ್ಷಿಕೆಯನ್ನು ಕಾರ್ನಾಡರು ಸೃಷ್ಟಿಸಿದ ನಾಟಕಕ್ಕೆ ಕೊಡಲು ಶ್ರೀ.ಜಿ.ಬಿ.ಜೋಶಿ ಹಾಗೂ ಶ್ರೀ ಕುರ್ತಕೋಟಿಯವರು ಸೂಚಿಸಿ, ಅದನ್ನು ಪ್ರಕಟಿಸಿದ್ದು ಹಳೆಯ ಇತಿಹಾಸ.

ಆದರೂ ಸಹ 'ತಲೆದಂಡ' ಎಂಬ ಶೀರ್ಷಿಕೆಯ ಗೌರವ ಬೇಂದ್ರೆ ವಿರಚಿತ ನಾಟಕದ ಮುಖಾಂತರ ಮತ್ತಷ್ಟು ಪ್ರವರ್ಧಮಾನಕ್ಕೆ ಬರಬೇಕಾಗಿದೆ.

**ತಲೆದಂಡ ನಾಟಕದ ಕಥಾಬೀಜ :**

"ಸ್ವಾತಂತ್ರ್ಯೋತ್ತರಕಾಲದಲ್ಲಿ ಬಸವಣ್ಣನವರು ರಾಜಕೀಯವ್ಯಕ್ತಿ, ಮಂತ್ರಿ, ಜಗಜ್ಯೋತಿ, ಸಾಮಾಜಿಕ ಕ್ರಾಂತಿ ಪುರುಷ, ವರ್ಗ ಹಾಗೂ ಸಂಘರ್ಷವನ್ನು ಕುರಿತು ಯೋಚಿಸಿದವರು ಅಂಬೇಡ್ಕರ್, ಕಾರ್ಲ್‌ಮಾರ್ಕ್ಸ್‌ರಂತೆ ವೈಚಾರಿಕ ತಿರುವುಕೊಟ್ಟವರು ಮೊದಲಾದ ಹಿನ್ನಲೆ ಆಧರಿಸಿ ಅನೇಕ ಚರಿತ್ರೆ, ಕಾದಂಬರಿ, ನಾಟಕಗಳು ನಿರ್ಮಾಣಗೊಂಡು, ಪುನರ್ ಮೌಲೀಕರಣದ ಮಹತ್ತ್ವದ ಕಾರ್ಯ ಸಾಗಿದೆ."[೫] ಆದರೆ ಬೇಂದ್ರೆಯವರು ತಮ್ಮ ಆಧ್ಯಾತ್ಮಿಕ ಪ್ರಭಾವದ ಹಿನ್ನಲೆಯಲ್ಲಿ ಬಸವಣ್ಣನನ್ನು ಅವತಾರೀ, ಕಾರಣೀಪುರುಷ ಎಂಬ ನೆಲೆಯಲ್ಲಿ ಚಿತ್ರಿಸಿರುವ ತಲೆದಂಡ ನಾಟಕವು ವಿಭಿನ್ನವಾಗಿ ಮೂಡಿಬಂದಿದೆ.

ಭಕ್ತಿಭಂಡಾರಿ ಬಸವಣ್ಣನ ಜೀವನೋದ್ದೇಶಗಳನ್ನು ಬಿಂಬಿಸುವ ಈ ಕೃತಿಯು ಅನನ್ಯವಾದುದು. ಕೈಲಾಸದಲ್ಲಿ ಶಿವ, ಪಾರ್ವತಿಯರು ರುದ್ರ ಗಣಗಳ ಮಧ್ಯದಲ್ಲಿ ನಿಂತು ಲಾಸ್ಯ ತಾಂಡವವನ್ನಾಡುತ್ತಿದ್ದಾಗ ಅಲ್ಲಿಗೆ ಬರುವ ನಾರದ ಮಹರ್ಷಿಗಳು "ಭೂಲೋಕದಲ್ಲಿ ಶಿವಭಕ್ತಿಯ ಸುಗ್ಗಿಯ ಕಾಲ ಬರಲಿದೆ. ಆದುದರಿಂದ ರುದ್ರ ಗಣ ಮತ್ತು ನಂದಿಯನ್ನು ಯುಗದ ಕಾರ್ಯಕ್ಕಾಗಿ ಭೂಲೋಕಕ್ಕೆ ಕಳಿಸಬೇಕು ಎಂದು ಶಿವನಲ್ಲಿ ಪ್ರಾರ್ಥಿಸುತ್ತಾರೆ. ನಂದಿಯು ಶಿವನನ್ನು ಅಗಲಿ ಭೂಲೋಕಕ್ಕೆ ತೆರಳಲು ಒಪ್ಪದಿದ್ದಾಗ ಶಕ್ತಿಯು "ನಾನೇ ನಂದಿಯಲ್ಲಿ ನಿಂತು, ಶಿವನು ನಂದಿಯನ್ನಗಲದಂತೆ ಮಾಡುವೆ" ಎಂದು ಅಭಯ ನೀಡುತ್ತಾಳೆ. ಇದಕ್ಕೆ ಒಪ್ಪಿದ ನಂದಿಯು ಬಾಗೇವಾಡಿಯಲ್ಲಿ ಮಾದರಸ, ಮಾದಲಾಂಬಿಕೆ ಎಂಬ ಬ್ರಾಹ್ಮಣ ದಂಪತಿಗಳ ಮಗನಾಗಿ ಅವತರಿಸುತ್ತಾನೆ ಬಸವಣ್ಣನು ಅಹಿಂಸಾ ಧರ್ಮವನ್ನು ಬೆಂಬಲಿಸಿ ಬ್ರಾಹ್ಮಣ ವರ್ಗ ನಡೆಸುತ್ತಿದ್ದ ಪಶುಹತ್ಯೆಯನ್ನು ನಿಲ್ಲಿಸಿದ್ದು, ಬಿಜ್ಜಳನ ಜೋತಿಷ್ಕ ಪಂಡಿತ ಮಂಚಣ್ಣನ ಕಣ್ಣನ್ನು ಕೆಂಪಗಾಗಿಸುತ್ತದೆ. ಮುಂದೆ ಬಸವಣ್ಣನು ಗುರು ಜಾತವೇದ ಮುನಿಗಳು ತೋರಿದ ದಾರಿಯನ್ನು ಅನುಸರಿಸಿ ಕೂಡಲಸಂಗಮಕ್ಕೆ ತೆರಳಿ ಆಧ್ಯಾತ್ಮಸಿದ್ಧಿಯನ್ನು ಪಡೆಯುತ್ತಾನೆ. ಇಲ್ಲಿ ಅನೇಕ ಪವಾಡಗಳನ್ನು ಮೆರೆಯುವ ಬಸವಣ್ಣನು ತನ್ನ ಕನಸಿನಲ್ಲಿ ಮೂಡಿಬಂದ ಶಿವನ ಆಜ್ಞೆಯನ್ನು ಪಾಲಿಸಲು ಬಿಜ್ಜಳನ 'ಮಂಗಳವಾಡ'ಕ್ಕೆ ಸಾಗಿ, ಅಲ್ಲಿನ ಶ್ರೀಕರಣದ ಚಾವಡಿಯಲ್ಲಿ ರಾಜ್ಯದ ಭಂಡಾರದ ಲೆಕ್ಕದಲ್ಲುಂಟಾಗಿದ್ದ ಗೊಂದಲವನ್ನು ನಿವಾರಿಸಿ ಬಿಜ್ಜಳನಿಗೆ ಹತ್ತಿರನಾಗುತ್ತಾನೆ.

---

೪. ಡಾ॥. ವಾಮನ ಬೇಂದ್ರೆ -ಸಂಪಾದಕರ ನುಡಿ-ತಲೆದಂಡ- ಪುಟ-೫೮

೫. ಡಾ॥ ಕೆ.ಎಸ್. ಶರ್ಮಾ-ಪ್ರಕಾಶಕರ ಭೂಮಿಕೆ- ತಲೆದಂಡ - ಪುಟ ೭

ಇದು ಮಂಚಣ್ಣನಿಗೆ ಅಗ್ನಿಸ್ಪರ್ಶದಷ್ಟು ಭಯಾನಕ! ಮಂಗಳವಾಡವು ತನ್ನ ಆಧ್ಯಾತ್ಮಿಕ ಸಾಧನೆಗೆ ಮೂಲ ಎಂದೇ ನಂಬಿದ್ದ ಬಸವಣ್ಣನು ಕಾಯಕತತ್ವವನ್ನು ಪಾಲಿಸುತ್ತಲೇ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಿ ಹಲವು ಪವಾಡಗಳನ್ನು ತೋರಿ, ಕುಲಭೇಧವಿಲ್ಲದ ಜಂಗಮ ಸಮಾಜವನ್ನು ನಿರ್ಮಿಸ ಹೊರಡುತ್ತಾರೆ. ಈ ನಡುವೆ ನಡೆಯುವ ಹರಳಯ್ಯ-ಮಧುವರಸರ 'ವಿಪರೀತ' ವಿವಾಹವು ವಿಪ್ಲವ ಹಾಗೂ ದಂಗೆಗೆ ಕಾರಣವಾಗುತ್ತದೆ. ಇದು ವರ್ಣಸಂಕರಕ್ಕೆ ಕಾರಣವಾಗುತ್ತದೆ ಎಂದು ಭಾವಿಸಿದ ಬಿಜ್ಜಳನು ಇದನ್ನು ತಡೆಯಲು ಬಸವಣ್ಣನ ಮೇಲೆ ಒತ್ತಡತಂತ್ರ ಹೇರುತ್ತಾನೆ. ಆದರೆ ಬಸವಣ್ಣನು ಶಿವನಿಗಲ್ಲದೆ ಮತ್ತಾರಿಗೂ ತನ್ನ ತಲೆ ಬಾಗುವುದಿಲ್ಲವೆಂದು ಘೋಷಣೆ ಮಾಡಿ ಮಂತ್ರಿ ಪದವಿಯನ್ನು ತ್ಯಜಿಸಿ, ತನ್ನ ಆರಾಧ್ಯ ದೇವರಾದ ಶಿವನಲ್ಲಿ ಐಕ್ಯವಾಗುವ ನಿರ್ಣಯವನ್ನು ಕೈಗೊಂಡು, ಕಲ್ಯಾಣದಿಂದ ಕೂಡಲ ಸಂಗಮಕ್ಕೆ ತೆರಳುತ್ತಾನೆ. ಬಸವಣ್ಣನ ಅವತಾರ ಕಾರ್ಯ ಮುಗಿದೊಡನೆ ಶಿವನಿಗೆ 'ತಲೆದಂಡ' ಅರ್ಪಿಸಿ ಮರಳಿ ಕೈಲಾಸದಲ್ಲಿ-ಐಕ್ಯ, ಲಿಂಗಾಂಗ ಸಾಮರಸ್ಯವಾಗುವುದರೊಡನೆ 'ತಲೆದಂಡ' ನಾಟಕವು ಮುಕ್ತಾಯವಾಗುತ್ತದೆ.

**ತಲೆದಂಡ ನಾಟಕದ ವಸ್ತು ವಿಶ್ಲೇಷಣೆ :**

ಕರ್ನಾಟಕದ ನೆಲದಲ್ಲಿಹುಟ್ಟಿ ಸಮತೆ, ಮಮತೆಯನ್ನು ಸಾರಿ ವಿಶ್ವ ಮಾನವತೆಯೆಡೆಗೆ ಸಾಗಿದ ಬಸವಣ್ಣನನ್ನು ಕುರಿತ ನೂರಾರುನಾಟಕಗಳು ಕನ್ನಡಸಾಹಿತ್ಯಲೋಕದಲ್ಲಿ ಮೂಡಿಬಂದಿವೆ. ಇವುಗಳಲ್ಲಿ ಬಹುತೇಕ ನಾಟಕಗಳು ಬಸವಣ್ಣನ ವ್ಯಕ್ತಿತ್ವದ ಹಿರಿಮೆ, ರಾಜಕೀಯ ಕ್ಷೇತ್ರ, ವಚನ ಸಾಹಿತ್ಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಮಾಡಿದ ಕ್ರಾಂತಿಯನ್ನು ಕುರಿತು ಹೆಚ್ಚು ಒತ್ತು ನೀಡಿವೆ. 'ಜಾತ್ಯಾತೀತ' ಮನೋಧರ್ಮ ಬೆಳೆಯಲು ಈ ನಾಟಕಗಳು ದಿಕ್ಸೂಚಿಯಾದಂತಿದೆ. ವರಕವಿ, ನಾಟಕಕಾರ ದ.ರಾ.ಬೇಂದ್ರೆ ವಿರಚಿತ 'ತಲೆದಂಡ' ನಾಟಕವು ಈ ಎಲ್ಲಾ ನಾಟಕಗಳಿಗಿಂತ ಭಿನ್ನವಾಗಿ ಭಕ್ತಿಭಂಡಾರಿ, ಪವಾಡಪುರುಷ ಬಸವಣ್ಣನ ವ್ಯಕ್ತಿತ್ವದ ವಿಕಾಸವನ್ನು ಭರತಮುನಿಯ ನಾಟ್ಯ ಶಾಸ್ತ್ರ ಹಾಗೂ ಧನಂಜಯನ ದಶರೂಪಕ ಶಾಸ್ತ್ರವನ್ನು ಆಧರಿಸಿ ಬೇಂದ್ರೆಯವರು ವೃತ್ತಿ ರಂಗಭೂಮಿಗಾಗಿಯೇ ಈ ನಾಟಕವನ್ನು ರಚಿಸಿದ್ದು ನಾಟಕವು ಭಾರತೀಯ ಪುರಾಣ ಪದ್ಧತಿ ಹಾಗೂ ಹರಿಹರನ ಬಸವರಾಜದೇವರ ರಗಳೆಯ ಹಿನ್ನಲೆಯಲ್ಲಿ ಬಸವಣ್ಣನನ್ನು ಅವತಾರೀ ಪುರುಷನಂತೆ ಚಿತ್ರಿಸಲಾಗಿದೆ.

ನಾಟಕದ ಮೊದಲ ದೃಶ್ಯವೇ 'ಕೈಲಾಸ'ದಲ್ಲಿ ಶಿವನು ಶಕ್ತಿ ಮತ್ತು ತನ್ನ ರುದ್ರ ಗಣದ ಜೊತೆಗೆ ಓಂಕಾರದ ಶ್ರುತಿಯೊಂದಿಗೆ, 'ಶಿವಾಯ ನಮಃ' ಎಂಬ ಮಂತ್ರೋಚ್ಚಾರದ ಹಿನ್ನಲೆಯೊಂದಿಗೆ ಲಾಸ್ಯ ನೃತ್ಯದೊಂದಿಗೆ ಪ್ರಾರಂಭವಾಗುತ್ತದೆ. ಇದರೊಂದಿಗೆ ಬೇಂದ್ರೆ ವಿರಚಿತ ತಲೆದಂಡ ನಾಟಕದ ವಸ್ತು ಬಸವಣ್ಣನನ್ನು 'ಕಾರಣೀಪುರುಷ'ನೆಂಬಂತೆ ಕಾಣುವುದೇ ಆಗಿದೆ ಎಂದು ಸಹೃದಯರಿಗೆ ಮನದಟ್ಟಾಗುತ್ತದೆ.

'ತಲೆದಂಡ' ನಾಟಕದ ಹಸ್ತಪ್ರತಿಗೆ ಮೂಲ ಆಕರ ಬಸವಣ್ಣನ ಸಮಕಾಲಿನ ನಾಗಿದ್ದ ಹರಿಹರನು ಬರೆದಿರುವ 'ಬಸವರಾಜದೇವರ ರಗಳೆ'ಯಾದರೂ ಸಹ ಬೇಂದ್ರೆಯವರು ಅಗತ್ಯಕ್ಕನುಗುಣವಾಗಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ. ನಾಟಕದ ಬೆಳವಣಿಗೆಗೆ ಅದು ಯುಕ್ತವೂ ಹೌದು. ರಗಳೆಯಲ್ಲಿನ 'ವೃಷಭಮುಖ'ನು ಬೇಂದ್ರೆ ನಾಟಕದಲ್ಲಿ 'ನಂದಿ'ಯಾಗಿದ್ದಾನೆ. ಹರಿಹರನ ರಗಳೆಯಲ್ಲಿ ಶಿವನ ಒಡ್ಡೋಲಗದಲ್ಲಿ ಶಿವನ ಆಜ್ಞೆಯಂತೆ ಎಲ್ಲರಿಗೂ ಸಂಪಗೆಯ ಹೂವನ್ನು ಪ್ರಸಾದದ ರೂಪದಲ್ಲಿ ನೀಡಿದ ವೃಷಭಮುಖನು 'ಪರವಶೀಭೂತನಾಗುತ್ತ ಮರಹಂ ಹೊತ್ತು' ಕುಮಾರಸ್ವಾಮಿಗೆ ಹೂವನ್ನು ಕೊಡದತಪ್ಪಿಗೆ ಪ್ರಾಯಶ್ಚಿತ್ತಹೊಂದಲು ಭೂಮಿಯಲ್ಲಿ ಅವತರಿಸುತ್ತಾನೆ. ಆದರೆ 'ತಲೆದಂಡ' ನಾಟಕದಲ್ಲಿ ನಾರದನ ಕೋರಿಕೆಯಂತೆ, ಭೂಲೋಕದಲ್ಲಿ ಬರಲಿರುವ ಶಿವಭಕ್ತಿಯ ಸುಗ್ಗಿಯ ಕಾಲದ ಯುಗ ಕಾರ್ಯವನ್ನು ನಿರ್ವಹಿಸಲು ನಂದಿಯು ನಿಯುಕ್ತನಾಗುತ್ತಾನೆ. ಈ ಮೂಲಕ ಬೇಂದ್ರೆಯವರು ಬಸವಣ್ಣನನ್ನು 'ಕಾರಣೀಪುರುಷ'ನನ್ನಾಗಿ ಕಂಡಿದ್ದಾರೆಯೇ ಹೊರತು ರಗಳೆಯು ಸಾರುವಂತೆ ಪ್ರಾಯಶ್ಚಿತ್ತಕ್ಕಾಗಿ ಹುಟ್ಟಿದವನಲ್ಲ ಎಂದು ಸಾರುವ ಪ್ರಯತ್ನ ಮಾಡಿದ್ದಾರೆ.

"ನಾನೇ ನಂದಿಯಲ್ಲಿ ನಿಂತು ಶಿವನು ನಂದಿಯನ್ನಗಲದಂತೆ ಮಾಡುವೆ" ಎಂಬ 'ಶಕ್ತಿ'ಯ ಅಭಯವನ್ನು(ತಲೆದಂಡ:ಪುಟ-೬)ಒಪ್ಪಿದ ನಂದಿಯು, ಶಿವನ ಆವಾಸ ಸ್ಥಾನಗಳಾದ ಹಿಮಗಿರಿ, ಕಾಶಿ, ಉಜ್ಜೈನಿ, ಸೌರಾಷ್ಟ್ರ, ಸೋಮನಾಥ, ಶ್ರೀಶೈಲ, ವೈಜನಾಥ ಮೊದಲಾದ ಕ್ಷೇತ್ರಗಳಲ್ಲಿ ಶಿವದರ್ಶನ ಮಾಡಿಕೊಂಡು ಬಾಗೇವಾಡಿಯ ಕಮ್ಮೆಕುಲದ ಮಾದಿರಾಜ ಮತ್ತು ಮಾದಾಂಬೆ ಎಂಬ ದಂಪತಿಗಳ ಮಗುವಾಗಿ ಹುಟ್ಟುತ್ತಾನೆ.

ಬಸವಣ್ಣನ ಜನನ ಮತ್ತು ಜೋಗುಳದ ಕಾಲಕ್ಕೆ ಬೇಂದ್ರೆಯವರು ಹರಿಹರನ ಕಾವ್ಯದ "ಮುಕುರದೊಳು ಮಾರ್ಪೊಳೆವ ಚಂದ್ರಮಂಡಲದಂತೆ ಜೋ...ಜೋ...ಜೋ..." (ಪುಟ-೬) ಮೊದಲಾದ ಉಪಮೆಗಳಿಂದ ಕೂಡಿದ ಸಾಲುಗಳನ್ನೇ ಜೋಗುಳ ಪದ್ಯವಾಗಿ ಬಳಸಿದ್ದು, ನಾಟಕದ ಮೂಲ ಆಕರವನ್ನು ಸ್ಪಷ್ಟಪಡಿಸುತ್ತದೆ.

ಬಸವಣ್ಣನು ಬಾಲ್ಯದಲ್ಲಿಯೇ ತನ್ನ ಹೆತ್ತವರನ್ನು ಕಳೆದುಕೊಂಡನೆಂದು ಪುರಾಣಗಳು ಸಾರುತ್ತವೆ. ಈ ಬಗ್ಗೆ ನೇರವಾಗಿ ಹೇಳದ ಬೇಂದ್ರೆಯವರು 'ಪರದೇಶಿಯಾಗಿ ವ್ರಾತ್ಯನಾಗಿ ಬಿಡುವಸಂಭವವಿದೆ' (ಪುಟ-೭)ಎಂದು ಗ್ರಹಿಸಿದ ಬಸವಣ್ಣನ ಸೋದರಮಾವ ಮತ್ತು ಬಿಜ್ಜಳನ ಮಂತ್ರಿಯಾಗಿದ್ದ ಬಲದೇವನು ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿದನು ಎಂದು ಹೇಳುತ್ತಾರೆ.

ಬಸವಣ್ಣನ ಬಗೆಗೆ ಮೂಡಿಬಂದಿರುವ ಬಹುತೇಕ ಕಾವ್ಯ, ಪುರಾಣ, ನಾಟಕ, ಕಾದಂಬರಿ ಮತ್ತು ಸಿನಿಮಾಗಳು ಬಸವಣ್ಣನು ಬ್ರಾಹ್ಮಣನಾಗಿ ಹುಟ್ಟಿದ್ದರೂ ಸಹ ಉಪನಯನ, ಜನಿವಾರ, ಯಜ್ಞೋಪವೀತಗಳನ್ನು ತ್ಯಾಗ ಮಾಡಿದುದರ ಕಡೆಗೆ ಹೆಚ್ಚು ಪ್ರಾಮುಖ್ಯತೆ ನೀಡಿವೆ. ಆದರೆ ಬೇಂದ್ರೆಯವರ 'ತಲೆದಂಡ' ನಾಟಕದಲ್ಲಿ ಇದು ದೃಶ್ಯ ರೂಪದಲ್ಲಿ ಬರುವುದಿಲ್ಲ. ಇದಕ್ಕಿಂತ ಮುಖ್ಯವಾಗಿ ಆತ 'ಅಹಿಂಸಾಧರ್ಮವನ್ನು ಬೆಂಬಲಿಸಿ ಪಶು ಹತ್ಯೆ ನಿಲ್ಲಿಸಿದ್ದು ಪ್ರಮುಖವಾಗಿ ಎದ್ದು ಕಾಣುತ್ತದೆ.

ಬೇಂದ್ರೆಯವರ ಪೂರ್ವಜರು ಯಜ್ಞಯಾಗಾದಿಗಳ ಸಂದರ್ಭದಲ್ಲಿ ಯಜ್ಞಕ್ಕೆ ಬಲಿಕೊಡಲು ಪಶುವಿಗೆ 'ಠೋಸಾ' ಹೊಡೆತದಿಂದ ಕೊಲ್ಲುವ ವೃತ್ತಿಯನ್ನು ಪಾಲಿಸುತ್ತಿದ್ದ ಬ್ರಾಹ್ಮಣರು. ಸ್ವತಃ ಅವರ ತಂದೆ ರಾಮಚಂದ್ರ ಬೇಂದ್ರೆಯವರು ಯಜ್ಞಯಾಗಾದಿಗಳನ್ನು ನಡೆಸುವವರಾಗಿದ್ದರು. ಈ ಹಿನ್ನಲೆಯ ದ.ರಾ.ಬೇಂದ್ರೆಯವರ 'ತಲೆದಂಡ' ನಾಟಕದ ದೃಶ್ಯ ೯ ಮತ್ತು ೧೦ ರಲ್ಲಿ ಪಶುವಧೆ ಮತ್ತು ಯಜ್ಞವನ್ನು ವಿರೋದಿಸಿ ಬಸವಣ್ಣನು ಆಡುವ "ಹಿಂಸೆಯನ್ನು ನಿಲ್ಲಿಸಿ, ಬಸವಣ್ಣ ಭೂಮಿಯ ಮಗ, ಎಲ್ಲರ ತಂದೆ, ಒಕ್ಕಲಿಗರಿಗೆ ರಾಜ, ಶಿವನಿಗೆ ವಾಹನ, ಅವನ ವಧೆ ಆಗಬಾರದು, ದೇವರಿಗೆ ಕೋಳಿ, ಕುರಿಗಳನ್ನು ಕೊಡಲಾಗದು"[೬೬] ಎಂಬ ಮಾತುಗಳು ಹಾಗೂ ಅದಕ್ಕೆ ಉತ್ತರವಾಗಿ ಜನರು "ಬ್ರಾಹ್ಮಣ ಹೇಳಿದ ಮೇಲೆ ನಾವು ಮಾತುಮೀರುವುದಿಲ್ಲ. ಆದರೆ ನಿಮ್ಮ ಜನರೇ ಕುರಿ ಹೊಡೆಯುತ್ತಾರಲ್ಲ? ಅದು ಹೇಗೆ"[೬೭] ಎಂದು ಹೇಳುವುದನ್ನು ನೋಡಿದಾಗ, ಬಸವಣ್ಣ ಮತ್ತು ದ.ರಾ.ಬೇಂದ್ರೆಯವರ ಜಾತಿ ಮತ್ತು ಜಾತಿಯನ್ನು ಮೀರಿದ ವೈಚಾರಿಕ ಮನೋಭಾವದ ಸಾಮ್ಯತೆ ಕಾಣುತ್ತದೆ. ಬೇಂದ್ರೆಯವರು ತಮ್ಮ ಪೂರ್ವಜರ 'ಠೋಸರ' ಹೊಡೆತದ ಕಡು ವಿರೋಧಿಯಾಗಿದ್ದರೆಂದೆನಿಸುತ್ತದೆ. ಬಸವಣ್ಣನಂತೆಯೇ ಬೇಂದ್ರೆಯವರುಸಹ ಮಹಾನ್ ಮಾನವಾತಾವಾದಿ ಎಂದು ಸ್ಪಷ್ಟವಾಗುತ್ತದೆ.

ಬಸವಣ್ಣನನ 'ದಯೆಯೇ ಧರ್ಮದ ಮೂಲವಯ್ಯ', 'ಹಬ್ಬಕ್ಕೆ ತಂದ ಹರಕೆಯ ಕುರಿ ತಳಿರ ಮೇಯಿತ್ತು' ಎಂಬ ವಚನಗಳನ್ನು ನೆನಪಿಸುವ ಈ ದೃಶ್ಯದನಂತರ ಬಿಜ್ಜಳನ ಜ್ಯೋತಿಷ್ಕ ಪಂಡಿತ ಮಂಚಣ್ಣನು ಬಸವಣ್ಣನ ಪ್ರಬಲ ವಿರೋಧಿಯಾಗುತ್ತಾನೆ. ಬಸವಣ್ಣನು ನಾಯಕನಾದರೆ, ಮಂಚಣ್ಣನೇ ಪ್ರತಿನಾಯಕ! ಇವನ ಕುತಂತ್ರದ ಕೋಲಾಹಲದಲ್ಲಿ ಜಾತವೇದಮುನಿಗಳು ಬಸವಣ್ಣನನ್ನು ಮಲಪ್ರಹರಿ ಕೃಷ್ಣವೇಣಿ–ಸಂಗಮ–ಕಪ್ಪಡಿ ಸಂಗಮ–ಕೂಡಲಸಂಗಮಕ್ಕೆ ಸಾಗಿಸುತ್ತಾನೆ. ಇದು ಬೇಂದ್ರೆ ಕಲ್ಪಿಸಿದ ಕಾರ್ಯಕಾರಣ ಸಂಬಂಧ. ಹರಿಹರ ಕವಿಯ ಬಸವಣ್ಣ 'ಅಂತರಂಗದ ಎಳೆತ'ದಿಂದ ಕೂಡಲಸಂಗಮಕ್ಕೆ ಬರುತ್ತಾನೆ. ಈ ದೃಶ್ಯದ ಮಟ್ಟಿಗೆ ಬೇಂದ್ರೆಯವರು ಹರಿಹರನಿಗಿಂತ ಭಿನ್ನವಾಗಿ ಬಸವಣ್ಣನನ್ನು ಪವಾಡದ ಗೆರೆಯಿಂದ ತುಸುದೂರ ಚಿತ್ರಿಸಿದ್ದಾರೆ ಎಂದೆನಿಸುವಷ್ಟರಲ್ಲಿಯೇ ಬಸವಣ್ಣನ ಆಧ್ಯಾತ್ಮ ಸಾಧನೆಯ ಸಿದ್ಧಿ ಪ್ರಕಟಗೊಳ್ಳುತ್ತದೆ.

---

೬೬, ೬೭. ದ.ರಾ.ಬೇಂದ್ರೆ–ತಲೆದಂಡ , ಪುಟ ೪೯.

"ಸಂಗಮೇಶ್ವರನ ಗುಡಿ, ಬಸವಣ್ಣ ಪೂಜೆಯಲ್ಲಿ ತೊಡಗಿದ್ದಾನೆ. ಭಾವಾವೇಶದಲ್ಲಿ ತನ್ನನ್ನೇ ಪೂಜಿಸಿಕೊಳ್ಳುತ್ತಿದ್ದಾನೆ. ಧೂಪ, ದೀಪ, ಆರತಿ ನೈವೇದ್ಯ ತನಗೆ ಮಾಡಿಕೊಂಡು, ಅದನ್ನು ತಾನೇ ಸ್ವೀಕರಿಸುತ್ತಾನೆ. ಜಾತವೇದಮುನಿಗಳು ಅವನ ಸಾಮರಸ್ಯಕ್ಕೆ ಬೆರಗಾಗಿರುತ್ತಾರೆ. ಬಸವಣ್ಣ ಸಮಾಧಿಯಿಂದ ಎಚ್ಚತ್ತು ಸಾಮಾನುಗಳನ್ನು ಅಣಿಮಾಡಿಕೊಂಡು ಮತ್ತೆ ಶಿವಪೂಜೆಗೆ ಸಿದ್ಧನಾಗಿ, ಪ್ರಸಾದವೆಲ್ಲಿದೆ? ಎಂದು ಕೇಳುತ್ತಾನೆ"[೭] ಇದಕ್ಕೆ ಜಾತವೇದಮುನಿಗಳು ಕೊಟ್ಟಉತ್ತರ "ನಿನ್ನಂಥವರ ಸಾಮರಸ್ಯದ ಪೂಜೆ, ಸಾಮಾನ್ಯ ಮರ್ತ್ಯರಿಗೆ ಅರ್ಥವಾಗದು"[೮] ಎಂದು. ಬಸವಣ್ಣನು ಅನುಭವಿಸಿದ್ದ ಇಂತಹ ಭಾವಾವೇಶದ ಆಧ್ಯಾತ್ಮದ ಪರಮೋನ್ನತಿಯ ಸ್ಥಿತಿಯನ್ನು ರಾಮಕೃಷ್ಣ ಪರಮಹಂಸರು ಹಾಗೂ ಅವರಶಿಷ್ಯ ಸ್ವಾಮಿ ವಿವೇಕಾನಂದರೂ ಅನುಭವಿಸಿದ್ದರು. ಆಧ್ಯಾತ್ಮಿಕ ಸಾಧನೆಯಲ್ಲಿ ಇದೂ ಮಹತ್ತ್ವದ್ದೇ. ಈ ಸಂದರ್ಭದಲ್ಲಿ 'ಹರಿಹರನ ಬಸವಣ್ಣ'ನು ಸಾತ್ವಿಕ ಭಾವರಸದ ಅಲೆಯಲ್ಲಿ ವಿಹರಿಸುವನು "ಕೂಡಲ ಸಂಗಮೇಶ್ವರ ಶ್ರೀಪಾದ ಕಮಳಮಕರಂದ ಮಧುಕರಾಯಮಾನನಾಗಿರ್ದಂ" ಎಂದು ಹರಿಹರನು ವರ್ಣಿಸಿರುವುದನ್ನು ಕಾಣಬಹುದು

ಎಂದಿನಂತೆಯೇ ಬಸವಣ್ಣನು 'ಸಂಗಮೇಶ್ವರನ ಗುಡಿಯಲ್ಲಿ ನಂದಿಯ ಹತ್ತಿರ ಮಲಗಿದ್ದಾಗ-ಕನಸಿನಲ್ಲಿ ಲಿಂಗದಿಂದ ಈಶ್ವರನು ಎದ್ದು ಬಂದು, ನಂದಿಯನ್ನೇರಿ ಕುಳಿತು 'ನಡೆ ಮಂಗಳವಾಡಕ್ಕೆ' ಎಂಬ ಆಜ್ಞೆ ಕೊಡುತ್ತಾನೆ. (ಹರಿಹರ-ಐದನೆಯ ಸ್ಥಲ ಆಜ್ಞೆ- "ನಡೆಯಯ್ಯಾ ನಡೆ ಮಗನೆ ನಡೆಕಂದ ಬಸವಣ್ಣ, ಪೊಡವಿಗಧಿಪತಿಯಾಗಿ ಬಾಳೆನ್ನ ಬಸವಣ್ಣ") ಬಸವಣ್ಣನು ತನಗೆ ಬಂದ ಕನಸಿನ ಬಗ್ಗೆ ಗುರು ಜಾತವೇದಮುನಿಗಳ ಬಳಿ ಹಂಚಿಕೊಂಡಾಗ ಆತ "ಬಸವಣ್ಣ ಮಂಗಳವಾಡಕ್ಕೆ ಹೋದರೆ, ಎಚ್ಚರದಿಂದಿರಬೇಕೆಂದೂ, ಸಂಪ್ರದಾಯ ಮುಗ್ಧರು ಅವನ ಹೊಚ್ಚ ಹೊಸ ರೀತಿಗೆ ಬೆರೆಯದೆ ವಿರೋಧಿಸಬಹುದೆಂದೂ ಶಿವನು ಪ್ರಕಟನಾಗಲಾರನೆಂದೂ ಎಚ್ಚರ ಕೊಡುತ್ತಾರೆ."[೯]

ಗುರುಗಳ ಮಾತನ್ನು ಕೇಳಿ ಸಂಗಮೇಶ್ವರನಲ್ಲಿ ಪ್ರಾರ್ಥಿಸಿ ಮಂಗಳವಾಡದ ಶ್ರೀಕರಣರ ಚಾವಡಿಯನ್ನು ಪ್ರವೇಶಿಸಿದ ಬಸವಣ್ಣನು ಅಲ್ಲಿ ಹತ್ತುಸಾವಿರ ಹೊನ್ನಿನ ಲೆಕ್ಕವಿಲ್ಲದರ ಬಗ್ಗೆ ತದ್ದೇವಾಡಿಯವರು ಹಾಗೂ ಮಂಗಳವಾಡದವರಿಬ್ಬರ ನಡುವೆ ನಡೆಯುತ್ತಿದ್ದ ವಾಕ್ಸಮರವನ್ನು ಕಂಡು ಕ್ಷಣ ಮಾತ್ರದಲ್ಲಿ "ತದ್ದೆವಾಡಿಯವರ ಲೆಕ್ಕ ಸರಿ ಇದೆ" ಎಂದು ಕಂಡು ಹಿಡಿಯುತ್ತಾನೆ. ಇದರಿಂದ ತನ್ನ ಸೋದರಳಿಯನ ಬಗೆಗೆ ಅಭಿಮಾನ ಹೊಂದಿದ ಬಲದೇವನು ಬಸವಣ್ಣನನ್ನು ಬಿಜ್ಜಳನಲ್ಲಿಗೆ ಕರೆದೊಯ್ದು ಭೇಟಿ ಮಾಡಿಸುತ್ತಾನೆ. ಈ ನಡುವೆ ಮಂಚಣ್ಣನು ಬಿಜ್ಜಳನನ್ನು ಕಂಡು "ಈ ಬಸವಣ್ಣಾ, ಬಾಗೇವಾಡಿಯಲ್ಲಿ ಯಜ್ಞ ವಿಧ್ವಂಸ, ಯಜ್ಞೋಪವೀತ ತ್ಯಾಗ ಮಾಡಿ ಅಧರ್ಮದ ಜ್ವಾಲೆ ಹಬ್ಬಿಸಿದ್ದಾನೆ. ಈ ಜ್ವಾಲೆ ನಿನ್ನ ರಾಜಧಾನಿಗೆ ತಲೆ ಹಾಕಿದೆ ಎಚ್ಚರ" ಎನ್ನುತ್ತಾನೆ. ಆದರೆ ಬಲದೇವನ ಬೆಂಬಲದ ಮೂಲಕ ಬಸವಣ್ಣನು ಬಿಜ್ಜಳನ ಶ್ರೀಕರಣರ ಚಾವಡಿಯಲ್ಲಿ ಊಳಿಗದವನಾಗಿ ಸೇರುತ್ತಾನೆ.

---

೭. ದ.ರಾ.ಬೇಂದ್ರೆ, ತಲೆದಂಡ ದೃಶ್ಯ ೧೬ಪುಟ ೧೧, ೧೨
೮. ದ.ರಾ.ಬೇಂದ್ರೆ . ತಲೆದಂಡ ದೃಶ್ಯ ೧೬ಪುಟ ೧೨
೯. ದ.ರಾ.ಬೇಂದ್ರೆ . ತಲೆದಂಡ ದೃಶ್ಯ ೨೨ ಪುಟ ೧೭

ಇಂಥ ಪ್ರಸಂಗದಲ್ಲಿಯೂ ಬಸವಣ್ಣನು ನಾನು "ಶಿವನ ಆಜ್ಞೆಯಿಂದ ಮಂಗಳವಾಡಕ್ಕೆ ಬಂದದ್ದೇ ಹೊರತು, ಯಾವುದೇ ಆಸೆ, ಬಯಕೆಯಿಂದಲ್ಲ".[೧೦] ಎಂದು ಸ್ಪಷ್ಟಪಡಿಸುತ್ತಾನೆ.

ಈ ದೃಶ್ಯದಲ್ಲಿ ಬಿಜ್ಜಳನು "ಬಸವಯ್ಯ! ನಿನಗೆ ಮಂಗಳವಾಡಕ್ಕೆ ಬರಲು ಹೆದರಿಕೆ ಆಗಲಿಲ್ಲವೆ?"[೧೧] ಎಂದು ಕೇಳುವುದು ತಾನೊಬ್ಬ ಸರ್ವಾಧಿಕಾರಿ ಎಂಬ ಭಾವನೆ ಬಿಜ್ಜಳನಲ್ಲಿಯೇ ಒಳ ಮೂಡಿ ತನ್ನ ನಾಡಿನಲ್ಲಿ ಭಯದ ವಾತಾವರಣವಿದೆ ಎಂಬುದನ್ನು ಸ್ಫುರಿಸುವಂತಿದೆ.

ಈ ನಡುವೆ ಮಂಚಣ್ಣನು ಬಸವಣ್ಣನ ವಿರುದ್ಧ ಜನರನ್ನು ಎತ್ತಿಕಟ್ಟಲು ಪ್ರಯತ್ನಿಸುತ್ತಾನೆ. ಆತನನ್ನು ಶಿವಾಲಯಕ್ಕೆ ಬರದಂತೆ ತಡೆಯಲು ಬಯಸುತ್ತಾನೆ. ಆದರೆ ಸ್ವತಃ ಮಂಚಣ್ಣನ ಪತ್ನಿ ಕಮಲಾಯಿಯೇ ಬಸವ ತತ್ವಕ್ಕೆ ತಲೆಬಾಗಿರುತ್ತಾಳೆ. ಇದರಿಂದ ಕ್ರೋಧನಾದ ಮಂಚಣ್ಣನು "ಆ ಮನುಷ್ಯನ ಗಾಳಿಯೇ ಇಂತಹುದು. ಹುಟ್ಟಿದ ಊರು ಕೆಡಿಸಿ ಹೊಕ್ಕನಾಡು ಕೆಡಿಸಲು ಅವನು ಬಂದಿದ್ದಾನೆ"[೧೨] ಎಂದು ಕಟುಕಿಯಾಡುತ್ತಾನೆ. ಇಂತಹ ಆಪಾದನೆಗಳು ಸಮಾನತೆಯ ತತ್ವವನ್ನು ಸಾರಲು ಹೊರಟ ಬಸವಣ್ಣನಿಗೆ ಹೊಸತಲ್ಲ. ಗಿರೀಶ್ ಕಾರ್ನಾಡರ 'ತಲೆದಂಡ' ನಾಟಕದಲ್ಲಿಯೂ ಜಗ್ಗಣ್ಣನು ಬಸವನ ಅನುಯಾಯಿಯಾದಾಗ, ಶಾಸ್ತ್ರಿಗಳ ನೆರೆಮನೆಯ ಭಾಗೀರಥಿಯು "ಆ ಬಸವಣ್ಣಗರೆ ತಿಳೀಬಾರದ? ಯಾರ ಮನೀಗೆ ಹೋದರೂ ಇದಾ ಕತಿ, ಅಪ್ಪ-ಮಗ್ಗ ಜಗಳ, ಅಣ್ಣ ತಮ್ಮಂದಿರೊಳಗ ಜಗಳ"[೧೩] ಎಂಬ ಮಾತುಗಳನ್ನಾಡಿದುದನ್ನು ಇಲ್ಲಿ ಸ್ಮರಿಸಬಹುದು. ತನ್ನ ಕಾಲಕ್ಕಿಂತ ಮಿಗಿಲಾದ ಕ್ರಾಂತಿಕಾರಿ ಆಲೋಚನೆ ಮಾಡಿದ ಬಸವಣ್ಣನ ತತ್ವಗಳು ಎಲ್ಲ ವರ್ಗದ ಜನರನ್ನು ಸಮನಾಗಿ ಮುಟ್ಟಲಿಲ್ಲ ಅವರು ಮಾಡಬಯಸಿದ ಕ್ರಾಂತಿಯು ಭ್ರೂಣಾವಸ್ಥೆಯಲ್ಲಿಯೇ ಅವಸಾನ ಹೊಂದಿತು ಎಂಬುದು ಇತಿಹಾಸದ ದುರಂತವೇ ಸರಿ.

ಹರಿಹರನ ಬಸವರಾಜದೇವರ ರಗಳೆಯನ್ನೇ ಆಕರವಾಗಿರಿಸಿಕೊಂಡಿರುವ ಬೇಂದ್ರೆಯವರ ತಲೆದಂಡ ನಾಟಕದ ಬಸವಣ್ಣನು ಸಾಮಾಜಿಕ, ಧಾರ್ಮಿಕ ಸುಧಾರಣಾ ಹರಿಕಾರನೂ ಹೌದು! ಪವಾಡಗಳನ್ನು ಮೆರೆಯಲು ಬಂದ ಕಾರಣೀಪುರುಷನೂ ಹೌದು!! "ಹರಿಹರನ ಕೃತಿಯಲ್ಲಿ ಬಸವಣ್ಣನವರು ಮೆರೆದಿರದ ಪವಾಡಗಳು ಎಂಟು.

೧. ಬಿಜ್ಜಳನ ಅರಮನೆಯಲ್ಲಿ ಗಣಕರು ಮಾಡಿದ ತಪ್ಪನ್ನು ಕಣ್ಣೋಟದಿಂದಲೇ ಸರಿಪಡಿಸಿದ್ದು,
೨. ಧರ್ಮ ನಿಷಿದ್ಧವಾದ ಕೇದಗೆ ಹೂವನ್ನು ಲಿಂಗಕ್ಕೆ ಏರಿಸಿದ್ದು,
೩. ಭಂಡಾರದ ಹಣ ದುರುಪಯೋಗವಾಗಿದೆಯೆಂದು ದೂರು ಬಂದು, ಲೆಕ್ಕ ಮಾಡಿದಾಗ ಅದು ನೂರ್ಮಡಿ ವರ್ಧಿಸಿದ್ದು,

---

೧೦. ಡಾ॥ ವಾಮನ ಬೇಂದ್ರೆ-ಸಂಪಾದಕರ ನುಡಿ - ತಲೆದಂಡ. ಪುಟ೨೦
೧೧. ದ.ರಾ. ಬೇಂದ್ರೆ: ತಲೆದಂಡ. ಪುಟ ೨೦.
೧೨. ದ.ರಾ.ಬೇಂದ್ರೆ-ತಲೆದಂಡ. ಪುಟ ೨೫
೧೩. ಗಿರೀಶ್ ಕರ್ನಾಡ್-ತಲೆದಂಡ. ಪುಟ-೪

೪. ಡಾಂಭಿಕರು ಬದನೆಕಾಯಿಗಳನ್ನು ತಮ್ಮ ಕಕ್ಷಪುಟದಲ್ಲಿ ಕಟ್ಟಿಕೊಂಡು, ತಾವೂ ಶರಣರೆಂದು ಬಂದಾಗ ಅವು ಶಿವಲಿಂಗಗಳಾಗಿ ಪರಿವರ್ತಿತವಾದುದು,

೫. ಬಾಗಿಲಿಗೆ ಬಂದ ಜಂಗಮರನ್ನು, ಬಾಗಿಲು ಕಾಯುವವರು ಮರಳಿ ಬರಲು ತಿಳಿಸಿದಾಗ, ಬಸವಣ್ಣನವರ ಪ್ರಾಣ ಅವರ ಹಿಂದೆಯೇ ಹೋಗಿ ಮತ್ತೆ ಅವರು ಬಂದಾಗ ಹಿಂತಿರುಗಿದುದು,

೬. ಕಂಬಳಿನಾಗಿದೇವನ ಕಾಲಬೆರಳಿನಿಂದ ಹಾಲಿನಧಾರೆಯನ್ನು ಕರೆಯಿಸಿದ್ದು,

೭. ಕಳಿಂಗ ದೇಶದಿಂದ ಮಹದೇವಸೆಟ್ಟಿ ಮುತ್ತು ರತ್ನಗಳನ್ನು ಬೇಡಲೆಂದು ಬಂದು ಸೋತು ಹೋದದ್ದು,

೮. ಸುಖೀ ಜಂಗಮನ ರೂಪದಲ್ಲಿ ಬಂದ ಶಿವನಿಗೆ ತನ್ನ ಪತ್ನಿಯಾದ ಮಾಯಿದೇವಿಯನ್ನೇ ನೀಡಿದ್ದು."[೧೪] ಎಂದು ಸಂಕ್ಷಿಪ್ತವಾಗಿ ಪಟ್ಟಿ ಮಾಡಬಹುದು,

ಆದರೆ ಬೇಂದ್ರೆಯವರು ಹರಿಹರನ ರಗಳೆಯು ಉಲ್ಲೇಖಿಸಿರುವ ಮೊದಲ ಮೂರು ಪವಾಡಗಳನ್ನು ಮಾತ್ರ ತಮ್ಮ ನಾಟಕದಲ್ಲಿ ಉಲ್ಲೇಖಿಸಿದ್ದಾರೆ. ಬಹುಶಃ ಬಸವಣ್ಣನವರು ಮಾಡಿದರೆಂದು ಹರಿಹರನು ಹೇಳಿರುವ ಎಲ್ಲಾ ೮ ಪವಾಡಗಳನ್ನು ನಾಟಕದಲ್ಲಿ ಬಳಸಿದ್ದರೆ ಬಸವಣ್ಣನ ಕ್ರಾಂತಿಕಾರಿ, ನೇರ, ಸಹಜ ಬದುಕಿಗೆ ಒಪ್ಪತಕ್ಕದ್ದಲ್ಲ ಎಂದು ಭಾವಿಸಿಯೇ ಬೇಂದ್ರೆಯವರು ಉದ್ದೇಶಪೂರ್ವಕವಾಗಿ ಈರೀತಿ ಮಾಡಿದ್ದರೆಂದೆನಿಸುತ್ತದೆ. ಚಂದ್ರಶೇಖರ ಕಂಬಾರರ 'ಶಿವರಾತ್ರಿ' ನಾಟಕದ ಬಸವಣ್ಣನಂತೂ ತಾನು "ಎಲ್ಲಿ, ಯಾವಾಗ, ಯಾವ ಪವಾಡ ಮಾಡ್ತೀನೋ ತಿಳೀದಾಂಗ ಆಗಿದೆ. ದಿನಾ ನನ್ನ ಹೆಸರಿಗೆ ಪವಾಡಗಳ ಕಟ್ಟುತ್ತಾರೆ"[೧೫] ಎಂದು ಅಸಹಾಯಕತೆಯನ್ನು ವ್ಯಕ್ತಪಡಿಸುವುದನ್ನು ಇಲ್ಲಿ ಸ್ಮರಿಸಬಹುದು.

"ಕಲ್ಯಾಣದಲ್ಲಿ ಲಿಂಗಧಾರಿಗಳ ಸಂಖ್ಯೆ ಬೆಳೆಯತೊಡಗಿ ಅವರಲ್ಲಿ ಕುಲಭೇದವೇ ಇಲ್ಲದಂತಾಗುತ್ತದೆ. ಇದೇ ಸೆಳವಿನಲ್ಲಿ ಕಲ್ಯಾಣದ ಮಧುವರಸ(ಬ್ರಾಹ್ಮಣ) ಹಾಗೂ ಹರಳಯ್ಯ(ಮೊಚ್ಚಿಗ) ಶಿವಭಕ್ತರಾಗಿ ಪರಿವರ್ತನೆಗೊಂಡದ್ದರಿಂದ "ಬಿಜ್ಜಳನ ರಾಜ್ಯಕ್ರಾಂತಿಗಿಂತ, ಬಸವನ ಧರ್ಮಕ್ರಾಂತಿಯೇ ಹಿರಿದಾಯ್ತು" ಎಂದು ಜನರು ಅಭಿಪ್ರಾಯ ಪಡುತ್ತಾರೆ. ಸಾಂಪ್ರದಾಯಿಕರಲ್ಲಿ-ಭೀತಿ, ಬೆರಗು, ನಿರಾಶೆ, ಶೈವರ ಬೀದಿಗಳಲ್ಲಿ ಕದ್ದು ಮುಚ್ಚಿ, ವೈಷ್ಣವರ ಬೀದಿಗಳಲ್ಲಿ ಪ್ರಕಟವಾಗಿ ಗಲಭೆ ಆಗುತ್ತಿದ್ದವು.[೧೬]

ಬಸವಣ್ಣನವರ ಏಳಿಗೆಯನ್ನು ಸಹಿಸದ ಮಂಚಣ್ಣನು ಬಸವನ ಮೇಲೆ ಬೊಕ್ಕಸದ ಹಣದ ದುರುಪಯೋಗದ ಅಪವಾದ ಹೊರಿಸಿದರೂ ಅದು ಯಶಸ್ಸಾಗದೆ ಮತ್ತಷ್ಟು ಅಸೂಯೆ ಪಡುತ್ತಾನೆ. ಆದರೆ ಅಂತಿಮವಾಗಿ ಅವನು ಮಧುವರಸ ಹಾಗೂ ಹರಳಯ್ಯರ ಮಕ್ಕಳ ಅಂತರ್ಜಾತಿಯ ವಿವಾಹವನ್ನು ತನ್ನ ಕುತಂತ್ರದ ಆಟಕ್ಕೆ ದಾಳವಾಗಿಸಿಕೊಳ್ಳುತ್ತಾನೆ. ಕೆಲವು ಶೈವ, ವೈಷ್ಣವ ಪಂಡಿತರೊಡನೆ ಬಿಜ್ಜಳನ ಬಳಿಗೆ ಬಂದು "ತಮ್ಮ ಕುಲಸ್ಥ ಕನ್ಯೆಯರಿಗೆ ಹೊಲೆಯರೇ ಉತ್ತಮ ವರರಾಗಿ ಕಾಣುತ್ತಿದ್ದಾರೆ, ಈ ಲಿಂಗ ದೃಷ್ಟಿಗೆ ಸ್ತ್ರೀಯರು ಕೆಟ್ಟ ಮೇಲೆ

---

೧೪. ಪ್ರೊ॥ ಬಿ. ವಿರೂಪಾಕ್ಷಪ್ಪ. ಬಸವಪಥ ಮೇ ೧೯೯೯ಲೇ-ಪವಾಡಗಳ ಹಿನ್ನಲೆಯಲ್ಲಿ ಬಸವರಾಜದೇವರ ರಗಳೆ. ಪುಟ೫೧

೧೫. ಚಂದ್ರಶೇಖರ ಕಂಬಾರ-ಶಿವರಾತ್ರಿ-ದೃಶ್ಯ೬,ಪುಟ ೬೦, ೬೧, ೨೦೧೧

೧೬. ಡಾ॥ ವಾಮನಬೇಂದ್ರೆ-ಸಂಪಾದಕರ ನುಡಿ-ತಲೆದಂಡ ಪುಟ-೬೫

ವರ್ಣಸಂಕರವಾಗದೆ ಉಳಿದೀತೆ? ವರ್ಣದ ಅಚ್ಚು ಮುರಿದರೆ ಸಾಮ್ರಾಜ್ಯದ ಕೆಚ್ಚು ಹೇಗೆ ಉಳಿದೀತು?" ಎಂದು ಕೆಣಕುತ್ತಾರೆ. ಈ ದೃಶ್ಯದ ಸಂಭಾಷಣೆಯು ಲಂಕೇಶರ ಸಂಕ್ರಾಂತಿ ನಾಟಕದ ಉಷಾಳನ್ನು ನೆನಪಿಸುತ್ತದೆ. ಕುಹಕಿಗಳು ತುಂಬಿದ ವಿಷದ ಚಾಡಿಮಾತಿನಿಂದ ಕ್ರುದ್ಧನಾದ ಬಿಜ್ಜಳನು ಬಸವಣ್ಣನನ್ನು ಕರೆಸಿ "ರಾಜದಂಡ ಯಾರಿಗೂ ತಡೆದು ನಿಲ್ಲವುದಿಲ್ಲ, ನನ್ನಮಾತು ನೀನು ಕೇಳಲೇಬೇಕು.[೧೭] ಎಂದು ಎಚ್ಚರಿಸುತ್ತಾನೆ. ಬಸವಣ್ಣನೋ ಹೇಳಿಕೇಳಿ 'ಭವಿ' ಬಿಜ್ಜಳನ ಮಾತಿಗೆ ಸೊಪ್ಪುಹಾಕದೆ ತಾನು "ಮಂತ್ರಿತ್ವ, ಶಿವನಕಾರ್ಯವೆಂದು ಮಾಡುತ್ತಿರುವೆನಲ್ಲದೆ, ರಾಯನ ಮನೆಯ ಕೂಲಿಯೆಂದಲ್ಲ. ತಾವು ಭುಜಬಲದಿಂದ ಗಳಿಸಿದ ರಾಜ್ಯ, ತಮ್ಮ ಮಂತ್ರಿಬಲದಿಂದ ಉಳಿಸಿಕೊಳ್ಳುವಿರೆಂದು ಕಟ್ಟಿದ ಮಂತ್ರಿಪಟ್ಟ ಕೆಳಗಿರಿಸಿ ಶಿವನ ಊಳಿಗಕ್ಕೆ ನಾನು ಹೊರಟೆ"[೧೭ಎ] ಎಂದು ಹೇಳಿ ಹೊರಟು ಹೋಗುತ್ತಾನೆ.

ನಾಟಕದ ಮುಕ್ತಾಯವು ವೈಶಿಷ್ಟ್ಯದಿಂದ ಕೂಡಿದೆ. ಮಂಚಣ್ಣನು ಬಸವಣ್ಣನವರನ್ನು- ವಿವಾಹದ ನಿಬ್ಬಣಕ್ಕಾಗಿ ಕರೆಯಲು ಬಂದು-"ಹರಳಯ್ಯ-ಮಧುವರಸ ವಿವಾಹ ಸಂಬಂಧ ಒಪ್ಪಿಗೆಯೇ" ಎಂದು ಪ್ರಶ್ನಿಸುತ್ತಾನೆ. "ಅವರ ಒಪ್ಪಿಗೆಗೆ ನಮ್ಮ ಆಶೀರ್ವಾದ, ಈ ವಿವಾಹ ಸಂಬಂಧ ದೇವ ದೇವನಿಗೂ ಒಪ್ಪಿಗೆ ಇದೆ." ಎಂದೂ ಸಾರುತ್ತಾನೆ. ಆದರೆ ವಿವಾಹಕ್ಕೆ ಪ್ರತ್ಯಕ್ಷ ಹೋಗುವುದಿಲ್ಲ. "ನನ್ನ ಪ್ರಾಣವೆಲ್ಲ ಕಣ್ಣಾಗಿ ಆ ಮಂಗಲವನ್ನೇ ನೋಡುತ್ತಿದೆ" ಎಂದು ಹೇಳಿ ಅಕ್ಕ ನಾಗಮ್ಮ, ಕಿನ್ನರಿ ಬೊಮ್ಮಯ್ಯ ಮೊದಲಾದ ಅನೇಕ ಶರಣರೊಂದಿಗೆ ಕೂಡಲ ಸಂಗಮದತ್ತ ಸಾಗುತ್ತಾನೆ.

ಈ ನಡುವೆ ರಾಜಪುರುಷರು ಮಧುವರಸ, ಹರಳಯ್ಯರನ್ನು ಬಂಧಿಸುತ್ತಾರೆ. ಅವರ ಕಣ್ಣು ಕೀಳುವ, ಆನೆಯ ಕಾಲಿಗೆ ಹಾಕಿ ತುಳಿಸುವ ಕ್ರೌರ್ಯ ನಡೆಯಲಿದೆ ಎಂದು ಕೂಗಾಟ ನಡೆದು ಕಲ್ಯಾಣದಲ್ಲಿ ಕೋಲಾಹಲವೆದ್ದು ಶೈವ, ವೈಷ್ಣ, ಜೈನ, ವಿಪ್ರರು ಪರಸ್ಪರ ಕೊಲೆಗೈದು ರಕ್ತಪಾತವಾಗುತ್ತದೆ. ಇಂದಿಗೂ ಕಾಣಬರುವ ಇಂತಹ ಮತಕಲಹಗಳೇ ಭಾರತದ ಜಾತ್ಯಾತೀತ ನಿಲುವಿಗೆ ಅಂಟಿರುವ ಕಳಂಕ ಎಂಬುದು ಖೇದವೇ ಸರಿ.

ಆ ಹೊತ್ತಿಗೆ ಮಲ್ಲಿ ಬೊಮ್ಮಯ್ಯ, ಜಗದೇವರು ಶಿವದ್ರೋಹಿಯಾದ ಭವಿ ಬಿಜ್ಜಳನಿಗೆ ದೇಹಾಂಗ ಪ್ರಾಯಶ್ಚಿತ್ತ ಕೊಡುವುದಾಗಿ ಹೇಳಿ ಶಸ್ತ್ರಾಸ್ತ್ರ ಸಹಿತವಾಗಿ ಏರಿಬಂದು ಬಿಜ್ಜಳನನ್ನು ಕೊಲೆಗೈಯ್ಯುತ್ತಾರೆ. ಈ ದೃಶ್ಯ ನಿರೂಪಣೆಯ ಸಮಯದಲ್ಲಿ ಬೇಂದ್ರೆಯವರು ಬಹು ಎಚ್ಚರಿಕೆಯ ಹೆಜ್ಜೆಯನ್ನಿಟ್ಟಿದ್ದಾರೆ ಐತಿಹಾಸಿಕ ನಾಟಕದಂತೆ ಇಲ್ಲಿ ಯುದ್ಧ ಕೌಶಲ್ಯ, ಹಾಗೂ ಹೊಡೆದಾಟದ ರೌದ್ರಕ್ಕೆ ಸ್ಥಾನಕಲ್ಪಿಸಿಲ್ಲ. ಇದಕ್ಕೆ ಬದಲಾಗಿ ಜಗದೇವ ಮಲ್ಲಬೊಮ್ಮಯ್ಯ ಅವೇಶ ಬಂದವರಂತೆ 'ವೀರಭದ್ರ ನೃತ್ಯ' ಮಾಡುತ್ತಾ ದಕ್ಷ ಅಧ್ವರ(ಯಜ್ಞ) ವಿಧ್ವಂಸರ ವಚನವನ್ನು ಹೇಳಿ ಕುಣಿಯುತ್ತಾನೆ. ವರ್ಣಸಂಕರದ ಅಸಂತೋಷದ ಎಳೆದಾಟದಲ್ಲಿ ಬಿಜ್ಜಳನ ಮರಣ ಆಕಸ್ಮಿಕವಾದಂತೆ ತೋರಿಸಲಾಗಿದೆ.

---

೧೭,೧೭ಎ-ದ.ರಾ.ಬೇಂದ್ರೆ, ತಲೆದಂಡ ಪುಟ-೪೫

ಬಿಜ್ಜಳನ ಅಂತ್ಯಕಾಲದಲ್ಲಿಯೂ ಆತ ತನ್ನ ಮಗನಾದ ರಾಯ ಮುರಾರಿಗೆ "ನಾನು ಉಳಿಯಲಿ, ಅಳಿಯಲಿ ಕಟ್ಟಿದ ಕಲ್ಯಾಣ ಅಳಿಯಬಾರದು. ಕಲ್ಯಾಣವನ್ನೇ ಬಿಟ್ಟು ಹೊರಟ ಬಸವಣ್ಣನನ್ನು ಮರಳಿ ಪಟ್ಟಣಕ್ಕೆ ತರಹೋಗಿ, ಯುವರಾಜ ರಾಯಮುರಾರಿಗೆ ಇದು ರಾಜನ ಕೊನೆಯ ಆಜ್ಞೆ"[೧೮] ಎಂದು ಹೇಳಿ ಪ್ರಾಣಬಿಡುತ್ತಾನೆ. ಈ ಸಂದರ್ಭದಲ್ಲಿ ಬಸವಣ್ಣನ ಶ್ರೇಷ್ಠತೆಯ ಬಗ್ಗೆ ಗೌರವ ಹಾಗೂ ಬಿಜ್ಜಳನ ಬಗೆಗೆ ಕರುಣೆ ಮೂಡುತ್ತದೆ. ನಾಟಕವು ಮತ್ತೆ ಪುರಾಣ ಪ್ರಸಂಗದಂತೆ ಸಾಗಿ, ಬಸವಣ್ಣನು "ನೀ ಕೊಟ್ಟ ತಲೆ ನಿನಗಲ್ಲದೆ ಅನ್ಯರಿಗಲ್ಲ" ಎಂದು ಸಾರಿ ಕೂಡಲ ಸಂಗಮದಲ್ಲಿ ಐಕ್ಯನಾಗುತ್ತಾನೆ.

ಒಟ್ಟಾರೆಯಾಗಿ ಹರಿಹರನ ಬಸವ ರಾಜದೇವರರಗಳೆಯನ್ನು ಆಕರವಾಗಿರಿಸಿಕೊಂಡು ರಚನೆಯಾಗಿರುವ 'ತಲೆದಂಡ' ನಾಟಕವು ಭಾರತೀಯ ದೃಷ್ಟಿಕೋನದ, ಅವತಾರಿ ಚಾರಿತ್ರ್ಯ ಸಫಲತೆಯ ಶ್ರೇಷ್ಠ ಕೃತಿಯಾಗಿದೆ.

## ನವರಸಗಳ ಆಧಾರದ ಮೇಲೆ ತಲೆದಂಡ ನಾಟಕದ ವಿಶ್ಲೇಷಣೆ :

ಭರತನ ನಾಟ್ಯಶಾಸ್ತ್ರದಲ್ಲಿ ೬ನೇಅಧ್ಯಾಯವು ನಾಟ್ಯರಸಗಳ ಸ್ವರೂಪವನ್ನು ತಿಳಿಸುತ್ತವೆ. ನವರಸಗಳಿಲ್ಲದೆ ನಾಟ್ಯವು ಪರಿಪೂರ್ಣವಾಗದೆಂದು ನಾಟ್ಯಶಾಸ್ತ್ರ ಸ್ಪಷ್ಟವಾಗಿ ಉದ್ಘೋಷಿಸುತ್ತದೆ. ದ.ರಾ.ಬೇಂದ್ರೆ ವಿರಚಿತ 'ತಲೆದಂಡ' ನಾಟಕವು ನವರಸಗಳಿಂದ ರಚಿಸಲ್ಪಟ್ಟಿದ್ದು ಸಹೃದಯನಿಗೆ ರಸಾಸ್ವಾಧನೆಯನ್ನುಂಟು ಮಾಡುತ್ತದೆ.

ತಲೆದಂಡ ನಾಟಕದ ಆರಂಭವೇ ಕೈಲಾಸದಲ್ಲಿ ಶಿವಪಾರ್ವತಿಯರು ಲಾಸ್ಯತಾಂಡವವನ್ನಾಡುವಂತೆ ಚಿತ್ರಿಸಲಾಗಿದೆ. ಈ ದೃಶ್ಯವು ಶೃಂಗಾರ ರಸದಿಂದ ಕೂಡಿದೆ. ಮತ್ತು ಅನೇಕ ಗಣಗಳು ಆತ್ಮಲಿಂಗದಲ್ಲಿ ಸಾಮರಸ್ಯ ಸುಖವನ್ನು ಅನುಭವಿಸುತ್ತಾರೆ. ದೃಶ್ಯ ೧೭ರಲ್ಲಿ ಬಿಜ್ಜಳ, ಲಚ್ಚಲೆಯರ ಪರಸ್ಪರ ಮಾತುಕತೆಯಲ್ಲಿಯೂ ಶೃಂಗಾರರಸ ಮೇಳೈಸಿದ್ದು, ಲಚ್ಚಲೆಯ ರಸಭರಿತ ಮಾತಿನಲ್ಲಿ ಹಾಸ್ಯರಸವೂ ಇಣುಕಿರುವುದು ಕಂಡುಬರುತ್ತದೆ. ದೃಶ್ಯ ೯ರಲ್ಲಿನ 'ದನದ ಬಲಿ', 'ಹಿಂಸೆ ನಿಲ್ಲಿಸಿ' ಎಂಬ ಬಸವಣ್ಣನ ಉಪದೇಶವು ಕರುಣಾರಸವನ್ನು ಸ್ಫುರಿಸಿದೆ. ದೃಶ್ಯ ೧೯ರಲ್ಲಿ ಬಸವಣ್ಣ ಬನದಲ್ಲಿ ಪತ್ರೆಪುಷ್ಪಗಳನ್ನು ಕೊಯ್ದಿಟ್ಟಾಗ ಅವು ಲಿಂಗಗಳಾಗಿ ತೋರಿಮಾಯವಾಗುತ್ತದೆ. ಈ ದೃಶ್ಯವು ಅದ್ಭುತವೆನಿಸುತ್ತದೆ, ಬೆರಗುಗೊಳಿಸುತ್ತದೆ.ದೃಶ್ಯ ೪೮ರಲ್ಲಿ ಜಗದೇವ, ಮಲ್ಲಿಬೊಮ್ಮಯ್ಯರು ರೌದ್ರಾವತಾರ ತಾಳಿ ಬಿಜ್ಜಳನನ್ನು ಕೊಲ್ಲುವ ದೃಶ್ಯ ರೌದ್ರರಸಕ್ಕೆ ಪ್ರಾದಾನ್ಯತೆ ನೀಡುತ್ತದೆ. ದೃಶ್ಯ ೪೭ರಲ್ಲಿ ಮಾಚಯ್ಯನು ಆವೇಶಗೊಂಡು ಬಿಜ್ಜಳನನ್ನು ಸಂಹರಿಸಬೇಕೆಂದು ಹೊರಡುವ ದೃಶ್ಯ ವೀರರಸಕ್ಕೆ ಪುಷ್ಠಿ ನೀಡುತ್ತದೆ. ಹೀಗೆ ತಲೆದಂಡ ನಾಟಕವು ನವರಸಗಳ ಪಾಕವೆನಿಸಿದೆ.

---

೧೮. ದ.ರಾ.ಬೇಂದ್ರೆ ತಲೆದಂಡ– ಪುಟ–೫೧

# ಅಧ್ಯಾಯ-೭

# ಭರತಮುನಿಯ ನಾಟ್ಯಶಾಸ್ತ್ರದ ಪಂಚಸಂಧಿಗಳು ಹಾಗೂ ಬೇಂದ್ರೆಯವರ ತಲೆದಂಡ ನಾಟಕ

# ಅಧ್ಯಾಯ: ೭

# ಭರತ ಮುನಿಯ ನಾಟ್ಯಶಾಸ್ತ್ರದ ಪಂಚಸಂಧಿಗಳು ಹಾಗೂ ಬೇಂದ್ರೆಯವರ ತಲೆದಂಡ ನಾಟಕ

"ನಾಟ್ಯಶಾಸ್ತ್ರವು ಭರತಮುನಿ ಪ್ರಣೀತವಾದುದು. ಇದನ್ನು ಸಾಮಾನ್ಯವಾಗಿ 'ನಾಟ್ಯವೇದ'ವೆಂದುಕರೆಯುವುದು ಸಂಪ್ರದಾಯ. ಭಾರತೀಯರ ದೃಷ್ಟಿಯಲ್ಲಿ ಎಲ್ಲ ಶೃತಿಗಳಿಗೂ, ಎಲ್ಲ ವಿಜ್ಞಾನಕ್ಕೂ ವೇದವೇ ಮೂಲ. ನಾಟ್ಯಶಾಸ್ತ್ರಕ್ಕೂ ಹಾಗೇಯೇ"[೧]

ಬ್ರಹ್ಮನು ಋಗ್ವೇದ, ಯಜುರ್ವೇದ, ಸಾಮವೇದ ಅಥರ್ವಣವೇದಗಳಿಂದ ಸಂಗೀತ, ಕಾವ್ಯ, ಅಭಿನಯ, ಅಲಂಕಾರ ನವರಸಗಳನ್ನು ಸಂಗ್ರಹಿಸಿ ಪಂಚಮವೇದವಾದ ನಾಟ್ಯಶಾಸ್ತ್ರವನ್ನು ಸೃಷ್ಟಿಸಿದನು ಮತ್ತು ಪ್ರಯೋಗಾರ್ಥವಾಗಿ ಭರತಮುನಿಗೆ ಈ ವೇದವನ್ನು ನೀಡಿದನು ಎಂದು ನಂಬಲಾಗಿದೆ. ಭರತಮುನಿಯು ನಾಟ್ಯಶಾಸ್ತ್ರವನ್ನು ರಚಿಸಿ ತನ್ನ ಸತತ ಪ್ರಯತ್ನದಿಂದ 'ಅಮೃತಮಂಥನ' ಎಂಬ ಕಥಾರೂಪವನ್ನು ನಿರ್ದೇಶಿಸಿ ನಂತರ ದೇವಲೋಕದಲ್ಲಿ ಮೊಟ್ಟಮೊದಲ ಬಾರಿಗೆ ಯಶಸ್ವಿಯಾಗಿ ಪ್ರದರ್ಶಿಸಿದನು. ಇದು ಪೂರ್ಣ ನಾಟಕರೂಪದಲ್ಲಿದ್ದುದರಿಂದ ಈ ಪ್ರದರ್ಶನವನ್ನು ನಾಟಕವೆಂದೇ ಭಾವಿಸಿ ಅರ್ಥೈಸಲಾಯಿತು. ಹೀಗಾಗಿ ಅಂದಿನಿಂದ ನಾಟ್ಯಶಾಸ್ತ್ರವನ್ನು ನಾಟಕ ಶಾಸ್ತ್ರವೆಂದು ಪರಿಗಣಿಸಲಾಯಿತು. ಒಟ್ಟಾರೆ ಹೇಳುವುದಾದರೆ 'ನಾಟ್ಯ' ಎಂದರೆ 'ನಾಟಕ' ಎಂದರ್ಥ.

## ನಾಟ್ಯಶಾಸ್ತ್ರದ ಸ್ವರೂಪ:

ನಾಟ್ಯಶಾಸ್ತ್ರವು ೩೬ ಅಧ್ಯಾಯ, ೬ ಸಾವಿರ ಶ್ಲೋಕ, ೧೨ ಸಾವಿರ ಪದ್ಯಗಳನ್ನು ಒಳಗೊಂಡಿದೆ, ಛಂಧಸ್ಸು, ಪ್ರವೃತ್ತಿ, ಸಂಗೀತ, ಪಾತ್ರ, ಅಭಿನಯ, ಪದ್ಯ, ಗದ್ಯ, ವ್ಯಾಕರಣ, ಭಾಷೆ ಮುಂತಾದ ಶಾಸ್ತ್ರೀಯ ತತ್ವಗಳನ್ನು ಒಳಗೊಂಡಿದೆ.

## ನಾಟ್ಯಶಾಸ್ತ್ರದ ಧ್ಯೇಯ:-

ಸ್ವರ್ಗದಿಂದ ಧರೆಗಿಳಿದ ನಾಟ್ಯಶಾಸ್ತ್ರ ಕೇವಲ ಮನೋರಂಜನೆಯಾಗದೇ, ಮಾನವನ ನಡೆನುಡಿಗಳನ್ನು ತಿದ್ದಿ ದುಃಖ, ಮೋಹ, ಮದ, ಮಾತ್ಸರ್ಯಗಳಿಂದ ಮಾನವನನ್ನು ಪ್ರತ್ಯೇಕಿಸಿ ಅತೀಮಾನವನನ್ನಾಗಿಸುವುದು, ನಾಟ್ಯ ಶಾಸ್ತ್ರದ ಧ್ಯೇಯ, ಇದು ದೃಶ್ಯವೂ ಇರಬಹುದು, ಶ್ರವ್ಯವೂ ಇರಬಹುದು. ಈ ಕಾವ್ಯ, ಸಂಗೀತ, ನೃತ್ಯ, ಶಿಲ್ಪ, ಲಲಿತಕಲೆ, ನವರಸಗಳ ಮಿಶ್ರಿತ ಗಣಿಯಾಗಿದೆ.

---

೧.ಕೆ.ಎಲ್.ನರಸಿಂಹ ಶಾಸ್ತ್ರೀ. (ಅನುವಾದಕರು) ಭರತಮುನಿ ವಿರಚಿತ ನಾಟ್ಯಶಾಸ್ತ್ರ .ಪುಟ-೭

## ಭರತನ ಪಂಚಸಂಧಿಗಳು:

ದ.ರಾ.ಬೇಂದ್ರೆಯವರು ಭಕ್ತಿ ಭಂಡಾರಿ ಬಸವಣ್ಣನವರು ಜೀವನದ ತಿರುಳನ್ನು ಆಧರಿಸಿ, 'ತಲೆದಂಡ' ನಾಟಕವನ್ನು ರಚಿಸಿದ್ದಾರೆ. ಈವರೆಗೆ ಬಸವಣ್ಣ-ಬಿಜ್ಜಳರ ಯುಗವನ್ನು ಆಧರಿಸಿ ಹಲವು ನಾಟಕಗಳು ರಚನೆಯಾಗಿದೆ. ಆದರೆ ಭರತ ಮುನಿಯ ನಾಟ್ಯ ಶಾಸ್ತ್ರದ ಆಧಾರದ ಮೇಲೆ ರಚಿಸಿದ ದ.ರಾ.ಬೇಂದ್ರೆಯವರ 'ತಲೆದಂಡ' ನಾಟಕ ತೀರಾ ವಿಭಿನ್ನ ಮತ್ತು ವಿಶಿಷ್ಟವಾಗಿದೆ. ಇಡೀ ಕಥಾ ಸ್ವರೂಪವು ಭರತನ ನಾಟ್ಯಶಾಸ್ತ್ರದ ಪಂಚಸಂಧಿಗಳಲ್ಲಿ ವಿಭಜನೆಗೊಂಡಿದೆ. ಭಾರತೀಯ ಮನೋಧರ್ಮವನ್ನು ಆಧರಿಸಿ, ಬಸವಣ್ಣನವರ ವ್ಯಕ್ತಿತ್ವದ ವಿಕಾಸವನ್ನು ಮುಖ, ಪ್ರತಿಮುಖ, ಗರ್ಭ, ಅವಮರ್ಶ ಹಾಗೂ, ನಿರ್ವಹಣ ಎಂಬ ಪಂಚಸಂಧಿಗಳಲ್ಲಿ ದೃಶ್ಯೀಕರಿಸಲಾಗಿದೆ.

## ಮುಖಸಂಧಿ: (ದೃಶ್ಯ ೧ ರಿಂದ ದೃಶ್ಯ ೧೨ ರ ವರೆಗೆ)

ಮುಖಸಂಧಿ ಎಂದರೆ 'ಆರಂಭ'. ನಾಟಕದ ವಸ್ತುವಿನ 'ಆರಂಭ' ತಲೆದಂಡ ನಾಟಕದ ಮೊದಲ ಹಂತ ಈ ಮುಖಸಂಧಿ ನಾಟಕದ ಕಥಾವಸ್ತು, ನಾಯಕ ಬಸವಣ್ಣನ ಜನನದಿಂದ ಆರಂಭವಾಗಿದೆ. ಶಿವನ ಆದೇಶದಂತೆ ನಂದಿಯು ಬಸವಣ್ಣನ ಅವತಾರದಲ್ಲಿ ಬಾಗೇವಾಡಿಯಲ್ಲಿ ಜನಿಸುತ್ತಾನೆ. ಏಸುಕ್ರಿಸ್ತ, ಮಹಮ್ಮದ್ ಪೈಗಂಬರ್, ಗೌತಮಬುದ್ಧ ಮೊದಲಾದ ಪವಾಡಪುರುಷರ ಜನನಕ್ಕೆ ಮಹತ್ ಕಾರಣಗಳಿದ್ದಂತೆ. ಸಾಮಾಜಿಕ, ಧಾರ್ಮಿಕ, ಸುಧಾರಣೆಯ ಕಾರ್ಯಕ್ಕಾಗಿ ಬಸವಣ್ಣನ ಜನನವಾಗಿದೆ. ಉಪನಯನ, ಯಜ್ಞೋಪವೀತ ತ್ಯಾಗ, ಅಹಿಂಸಾವಾದ, ಪಶುಹತ್ಯೆ ನಿಲ್ಲಿಸಿ ಎಂಬ ಉಪದೇಶಗಳು ಹಿತೈಶಿಗಳ ಜೊತೆಗೆ ವಿರೋಧಿಗಳನ್ನು ಸಂಪಾದಿಸುತ್ತಾರೆ. ಬಸವಣ್ಣನ ಸುಧಾರಣೆ ಪ್ರತಿನಾಯಕ ಮಂಚಣ್ಣನ ವಿರೋಧದ ಜೊತೆಜೊತೆಗೆ ನಾಟಕ ಸಾಗುತ್ತದೆ. ಭರತನ ನಾಟ್ಯಶಾಸ್ತ್ರದ ಮುಖಸಂಧಿ ನಾಯಕ ಬಸವಣ್ಣನ ಜನನದ ದೃಶ್ಯದಿಂದ ಹಿಡಿದು ಬಸವಣ್ಣನ ಬಾಗೇವಾಡಿ ಜೀವನ ಹದಗೆಡಿಸುವ ಪ್ರತಿನಾಯಕ ಮಂಚಣ್ಣನ ಕುತಂತ್ರದವರೆಗೆ ಮೀಸಲಾಗಿದೆ.

## ಪ್ರತಿಮುಖಸಂಧಿ:- (ದೃಶ್ಯ ೧೪ ರಿಂದ ದೃಶ್ಯ ೨೨ ರವರೆಗೆ)

ಪ್ರತಿಮುಖ ಸಂಧಿ ಎಂದರೆ ನಾಟಕದ ವಸ್ತುವಿನ 'ಯತ್ನ' ನಡೆಸುವ ತಲೆದಂಡ ನಾಟಕದ ೨ನೇ ಹಂತ ಬಸವಣ್ಣನ ಯಜ್ಞೋಪವೀತತ್ಯಾಗವು ಶಾಸ್ತ್ರಿ ಸಮೂಹದ ವಿರೋಧಕ್ಕೆ ಕಾರಣವಾಗಿ ಜಾತವೇದಮುನಿಗಳೊಂದಿಗೆ ಕೂಡಲ ಸಂಗಮಕ್ಕೆ ಸಾಗುವುದರೊಂದಿಗೆ ಆರಂಭವಾಗಿದೆ. ಸಂಗಮೇಶ್ವರ ಗುಡಿಯಲ್ಲಿ ಬಸವಣ್ಣ ಭಾವಾವೇಷದಿಂದ ತನ್ನನ್ನೇ ಪೂಜಿಸಿಕೊಳ್ಳುವ ದೃಶ್ಯ ಬೆರಗುಗೊಳಿಸುತ್ತದೆ. ಈ ಭಾವಾವೇಷದ ಸ್ಥಿತಿಯನ್ನು ರಾಮಕೃಷ್ಣ ವಿವೇಕಾನಂದರು ಅನುಭವಿಸಿದ್ದರು ಹಾಗೂ ಬಸವಣ್ಣ ಕೊಯ್ದಿಟ್ಟ ಪತ್ರೆಪುಷ್ಪಗಳು ಲಿಂಗಗಳಾಗಿ ತೋರಿ ಮಾಯವಾಗುವ ಪವಾಡ ಚಮತ್ಕಾರದಿಂದ ಕೂಡಿದೆ. ಪ್ರತಿಮುಖ ಸಂಧಿಯ ಪ್ರಮುಖ ತಿರುವು ಎಂದರೆ ಕುತಂತ್ರಿ ಮಂಚಣ್ಣ ಬಿಜ್ಜಳರಿಗೆ ತಮಗೆ ಮಹಾಸಿಧಿಯೊಂದು ಪ್ರಾಪ್ತವಾಗಲಿದೆ, ಈ ಪ್ರಾಪ್ತಿಗೆ ಕಾರಣವಾಗುವ ಪುರುಷನೇ ತಮ್ಮ

ಅಂತ್ಯಕ್ಕೂ ಕಾರಣನಾಗುತ್ತಾನೆ ಎಂದು ನುಡಿಯುವ ಮೂಲಕ ಆರಂಭದಲ್ಲಿಯೆ ಬಸವಣ್ಣನ ವಿರುದ್ಧ ಕುತಂತ್ರ ನಡೆಸುತ್ತಾನೆ. ಬಸವಣ್ಣನ ಕನಸಿನಲ್ಲಿ ಶಿವನು ಮಂಗಳವಾಡಕ್ಕೆ ನಡೆ ಎಂದು ಆಜ್ಞೆ ಕೊಡುತ್ತಾನೆ. ಕ್ರಿಸ್ತನ ಬೆತ್ಲಹೆಮ್‌ನಿಂದ ಜೆರ್‍ಯೂಸಲೆಮ್ ಕಡೆಗೆ ಆಗಮನ, ಪೈಗಂಬರನ ಮೆಕ್ಕಾದಿಂದ ಮದೀನಕ್ಕೆ ಆಗಮನದ ಹಿಂದೆ ಮಹತ್ಕಾರ್ಯದ ಕಾರಣವಿದ್ದಂತೆ ಬಸವಣ್ಣನು ಬಾಗೆವಾಡಿಯಿಂದ ಸಂಗಮಕ್ಕೆ, ಸಂಗಮದಿಂದ ಮಂಗಳವಾಡಕ್ಕೆ ಸಾಗುವ ವಿಚಾರವೇ ಬಸವಣ್ಣನ ಜೀವನದ ಪ್ರತಿಮುಖ ಕ್ರಿಯೆ. ಈ ಹಂತದಲ್ಲಿ ಬಸವಣ್ಣನ ಜೀವನ ಮಹೋನ್ನತ ತಿರುವನ್ನು ಕಂಡುಕೊಳ್ಳುತ್ತದೆ.

**ಗರ್ಭ ಸಂಧಿ:– (ದೃಶ್ಯ ೨೩ ರಿಂದ ದೃಶ್ಯ ೨೮ರ ವರೆಗೆ)**

ಗರ್ಭಸಂಧಿ ಎಂದರೆ "ಪ್ರಾಪ್ತ್ಯಶೆ". ನಾಟಕದ ವಸ್ತುವಿನ ಗಳಿಕೆ. ತಲೆದಂಡ ನಾಟಕದ ಮೂರನೇ ಮತ್ತು ಪ್ರಮುಖ ಹಂತ. ಒಂದು ದೇವಾಲಯಕ್ಕೆ ಗರ್ಭಗುಡಿ ಪ್ರಮುಖವಾದಂತೆ ಈ ನಾಟಕಕ್ಕೆ ಬಸವಣ್ಣನ ಮಂಗಳವಾಡದ ಜೀವನವನ್ನು ಆಧರಿಸಿದ ವಿಚಾರಗಳು ನಾಟಕದ ಕೇಂದ್ರಬಿಂದುವಾಗಿವೆ. ಮಂಗಳವಾಡದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಆಶ್ರಯ ಪಡೆದ ಬಸವಣ್ಣ "ತಾನು ಶಿವನ ಆಜ್ಞೆಯಿಂದ ಬಂದವನೇ ಹೊರತು ಯಾವುದೆ ಆಸೆಯಿಂದಲ್ಲ" ಎಂದು ನುಡಿಯುತ್ತಾನೆ. ಈ ಮಾತುಗಳು "ತಾನು ಈಶನ ಅಧೀನ, ಲಿಂಗಕ್ಕೆ ತನ್ನ ತಲೆ ಬಾಗುತ್ತದೆಯೇ ಹೊರತು ಪರರ ಅಧಿಕಾರಕ್ಕಲ್ಲ" ಎಂಬುದನ್ನು ಸ್ಪಷ್ಟಪಡಿಸುತ್ತಾನೆ. ಇದೆ ನಾಟಕದ ಜೀವಾಳ ಗರ್ಭ. ಈ ಹಂತದಲ್ಲಿ ಸಂದರ್ಭಾನುಸಾರ ಬಸವಣ್ಣನಿಗೆ ಮಂತ್ರಿ ಪದವಿಯ ಸ್ಥಾನದ ಪ್ರಾಪ್ತಿ, ಕಲ್ಯಾಣದಲ್ಲಿ ಲಿಂಗಧಾರಿಗಳ ಸಂಖ್ಯೆ ಹೆಚ್ಚಳ, ಧರ್ಮ ಕ್ರಾಂತಿ, ಕಳ್ಳತನದ ಆರೋಪದಿಂದ ಮುಕ್ತನಾಗಿ, ಬಿಜ್ಜಳನ ಮತ್ತಷ್ಟು ಅಭಿಮಾನವನ್ನು ಪಡೆಯುತ್ತಾನೆ. ಈ ಹಂತದ ಕೇತಕಿ ಪ್ರಸಂಗ ಕಣ್ಣಿಗೆ ಪವಾಡದ ಅನುಭವ, ಈರುಳ್ಳಿಯ ಪ್ರಸಂಗ, ವಿಶಿಷ್ಟವಾಗಿದೆ. ಬಸವಣ್ಣನವರಿಗೆ ಆಧ್ಯಾತ್ಮದ ಬೆಂಬಲವಿದ್ದರೂ ಮಂಚಣ್ಣನ ಕುತಂತ್ರದಿಂದ ಅಭದ್ರದತ್ತ ಸಾಗುವ ಕ್ರಿಯೆಯೇ ಗರ್ಭಸಂಧಿ.

**ಅವಮರ್ಶ ಸಂಧಿ:– (ದೃಶ್ಯ ೨೯ ರಿಂದ ದೃಶ್ಯ ೪೮ ರವರೆಗೆ)**

ಅವಮರ್ಶ ಎಂದರೆ "ನಿಯತಾಪ್ತಿ" ನಾಟಕದ ವಸ್ತು ತಿರುವು ಪಡೆದುಕೊಳ್ಳುವುದು. ತಲೆದಂಡ ನಾಟಕದ ನಾಲ್ಕನೇ ಹಂತ. ಈ ಹಂತದಲ್ಲಿ ಕಲ್ಯಾಣದ ಒಳಿತು–ಕೆಡಕು ಎರಡೂ ವಿಚಾರಗಳ ಮೂಲಕ ನಾಟಕ ಸಾಗುತ್ತದೆ. ಒಂದೆಡೆ ಕಲ್ಯಾಣದಲ್ಲಿ ಬಸವಣ್ಣ ಶಿವಧೀಕ್ಷೆಯಿಂದ ವರ್ಣರಹಿತ ಸಮಾಜದ ಸೃಷ್ಠಿಯ ಪ್ರಯೋಗಮಾಡಿದರೆ, ಇನ್ನೊಂದೆಡೆ ಮಂಚಣ್ಣ ಕಲ್ಯಾಣದ ಸಾಮಾಜಿಕ ಪರಿಸರವನ್ನು ಕೆಡಿಸಿ, ರಾಜಕೀಯ ಕೋಲಾಹಲವನ್ನು ಎಬ್ಬಿಸುತ್ತಾನೆ. ಅಂತರ್ಜಾತಿಯ ವಿವಾಹ ಮಾಡಿಸುವ ಮೂಲಕ ಸಮಾಜದಲ್ಲಿ ಸಮಾನತೆ ಕಾಪಾಡುವಲ್ಲಿ

ಬಸವಣ್ಣ ನಡೆಸಿದ ಪ್ರಯತ್ನವು ವಿಪ್ಲವ ಮತ್ತು ದಂಗೆಯ ವಾತಾವರಣವನ್ನು ನಿರ್ಮಿಸುತ್ತದೆ. ಇದು ಬಿಜ್ಜಳನ ವಿರೋಧಕ್ಕೆ ಕಾರಣವಾಗುತ್ತದೆ. ಬಸವಣ್ಣನು ಮಂತ್ರಿಪದವಿಯನ್ನು ತ್ಯಜಿಸಿ ತನ್ನ ತಲೆಯನ್ನು ಶಿವನಿಗೆ ಅರ್ಪಿಸಿ ತನ್ನ ಕಾರ್ಯ ಪೂರ್ಣಗೊಳಿಸಿ ಸಾರ್ಥಕತೆ ಪಡೆಯಲು ಕೂಡಲ ಸಂಗಮದತ್ತ ಹೊರಟುಬಿಡುತ್ತಾನೆ. ಬಸವಣ್ಣನ ಈ ನಿರ್ಧಾರದಲ್ಲಿ ರಾಜಕೀಯ ಹಾಗೂ ಸಾಮಾಜಿಕ ಕ್ರಾಂತಿಗಿಂತ, ಆತ್ಮವಿಶ್ವಾಸ, ಅವತಾರ ಕಾರ್ಯಗಳೇ ಶ್ರೇಷ್ಠವೆಂದು ತಿಳಿದುಬರುತ್ತದೆ.

**ನಿರ್ವಹಣಾ ಸಂಧಿ:– (ದೃಶ್ಯ ೪೯ ರಿಂದ–೫೭ರ ವರೆಗೆ)**

ನಿರ್ವಹಣಾ ಸಂಧಿ ಎಂದರೆ 'ನಿರ್ಗಮನ ಫಲಾಗಮ'. ನಾಟಕದ ವಸ್ತುವಿನ ಪರಿಪೂರ್ಣತೆ. ತಲೆದಂಡ ನಾಟಕದ ಕೊನೆಯ ಹಂತ. ಬಸವಣ್ಣ ತನ್ನ ಅವತಾರ ಕಾರ್ಯ ಮುಗಿದ ಅರಿವು ಉಂಟಾಗಿದ್ದರಿಂದ ಕೈಲಾಸದತ್ತ ನಿರ್ಗಮನ ಮಾಡುವ ಹಂತವಾಗಿದೆ. ಪ್ರಜೆಗಳ ವರ್ಣಕಲಹ ಬಿಜ್ಜಳನನ್ನು ಬಲಿ ತೆಗೆದುಕೊಳ್ಳುತ್ತದೆ. ತನ್ನ ಕೊನೆಗಾಲದಲ್ಲಿಯೂ ಕಲ್ಯಾಣ ಅಳಿಯಬಾರದೆಂದು ಬಸವಣ್ಣನನ್ನು ಕರೆತರಬೇಕೆಂದು ಆಜ್ಞೆಯಿತ್ತು ಪ್ರಾಣಬಿಡುತ್ತಾನೆ. ಆದರೆ ಬಸವಣ್ಣನು ತನ್ನ ಅವತಾರಕಾರ್ಯ ಮುಗಿಯಿತೆಂದು ಶಿವನಲ್ಲಿ "ನೀ ಕೊಟ್ಟ ತಲೆ ನಿನಗಲ್ಲದೆ ಅನ್ಯರಿಗಲ್ಲ ಎಂದು ಸಾರಿ ಕೂಡಲ ಸಂಗಮದಲ್ಲಿ ಐಕ್ಯನಾಗುತ್ತಾನೆ. ಶಿವನಿಗೆ ತಲೆಯನ್ನು ಅರ್ಪಿಸದಿದ್ದರೆ ನಾಟಕದ ಕಥಾಬೀಜಕ್ಕೆ ಕೊಡಲಿಏಟು ಬೀಳುತ್ತಿತ್ತು. ಹೀಗಾಗಿ ಬಸವಣ್ಣನವರ ಶಿವಾರ್ಪಿತ ಅವತಾರಿ ಜೀವನದ ಗೆಲುವು, ಮಂಚಣ್ಣನ ಕಪಟ ನಾಟಕದ ಸೋಲಾಗಿದೆ ಒಟ್ಟಾರೆ ನಾಟಕದ ಕೊನೆಯ ಹಂತ ಬಸವಣ್ಣನು ಲಿಂಗದಲ್ಲಿ ಐಕ್ಯವಾಗುವುದರೊಂದಿಗೆ (ಫಲಾಗಮವಾಗುವುದರೊಂದಿಗೆ) ಮುಕ್ತಾಯಗೊಳ್ಳುತ್ತದೆ.

ದ.ರಾ. ಬೇಂದ್ರೆಯವರು ಭರತನ ನಾಟ್ಯಶಾಸ್ತ್ರದ ಪಂಚವಿಸಂಧಿಗಳನ್ನು ದೃಶ್ಯೀಕರಿಸಿ ರಚಿಸಿದ ತಲೆದಂಡ ನಾಟಕ ಭಾರತೀಯ ದೃಷ್ಟಿಕೋನದ ಅವತಾರಿ ಚಾರಿತ್ಯ ಸಫಲತೆಯ ಶ್ರೇಷ್ಠಕೃತಿ ಆಗಿದೆ. ಈ ನಾಟಕವು ಸಂಪೂರ್ಣ ನಾಟ್ಯಶಾಸ್ತ್ರದ ತತ್ವಗಳನ್ನು ಆಧರಿಸಿ ರಚಿಸಿದ್ದರಿಂದ ಶಾಸ್ತ್ರದ ದೃಷ್ಟಿಯಿಂದ ಪರಿಪೂರ್ಣವಾಗಿದೆ.

# ಅಧ್ಯಾಯ–೮

## ಬಸವಣ್ಣ ಮತ್ತು ಬಿಜ್ಜಳ ಕೇಂದ್ರಿತ ಕನ್ನಡದ ಇತರ ನಾಟಕಗಳ ವಸ್ತುವಿವೇಚನೆ

೧. ಲಂಕೇಶರ ಸಂಕ್ರಾಂತಿ

೨. ಹೆಚ್.ಎಸ್.ಶಿವಪ್ರಕಾಶರ ಮಹಾಚೈತ್ರ

೩. ಗಿರೀಶ್ ಕಾರ್ನಾಡರ ತಲೆದಂಡ

೪. ಚಂದ್ರಶೇಖರ ಕಂಬಾರರ ಶಿವರಾತ್ರಿ

# ಅಧ್ಯಾಯ – ೮

## ಬಸವಣ್ಣ ಮತ್ತು ಬಿಜ್ಜಳಕೇಂದ್ರಿತ ಕನ್ನಡದ ಇತರ ನಾಟಕಗಳ ವಸ್ತುವಿವೇಚನೆ.

ಬಸವಣ್ಣನದು ಬಹುಮುಖ ವ್ಯಕ್ತಿತ್ವ ಆತ ಯುಗಪ್ರವರ್ತಕ, ಭಕ್ತಿ ಭಂಡಾರಿ, ಮಹಾ ಅನುಭಾವಿ, ಸಮಾಜ ಸುಧಾರಕ, ದಾರ್ಶನಿಕ, ವಿಚಾರವಾದಿ. ಇಂತಹ ಸಾಧಕನ ಹುಟ್ಟು, ಜೀವನ, ಪವಾಡ, ಸಾಧನೆ ಹಾಗೂ ಅಂತ್ಯದ ಕುರಿತು ಸಾಕಷ್ಟು ಸಾಹಿತ್ಯ ಕೃಷಿ ನಡೆದಿದೆ, ಈಗಲೂ ನಡೆಯುತ್ತಿದೆ ಮತ್ತು ಮುಂದೆಯೂ ನಡೆಯುತ್ತದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆತನ ಬಾಳು ಪುರಾಣ ಕಾವ್ಯವಾಗಿದೆ. ರಗಳೆ ಶಾಸ್ತ್ರವಾಗಿದೆ. ನಾಟಕ ಮತ್ತು ಕಾದಂಬರಿಗಳಲ್ಲಿ ನಡೆದಾಡುತ್ತಿದೆ. ಅನೇಕ ಕವನಗಳು ಅವರ ಬಾಳಿನ ಹೆಜ್ಜೆಗಳಾಗಿವೆ ಆತನನ್ನು ನೋಡುವವರ ಮೂಲ ದೃಷ್ಟಿಗಳೂ ತರಹ ತರಹ, ವಿಧವಿಧವಾದವುಗಳು. ಪ್ರಸ್ತುತ ಅಧ್ಯಾಯದಲ್ಲಿ ಕನ್ನಡದ ನಾಟಕ ಸಾಹಿತ್ಯದಲ್ಲಿ ಮೂಡಿದ ಬಸವಣ್ಣನ ವ್ಯಕ್ತಿತ್ವವನ್ನು ಮಂಥಿಸಿ, ಆ ಹಿನ್ನಲೆಯಲ್ಲಿ ಅವರನ್ನು ರೂಪಕಾಕೃತಿಯನ್ನಾಗಿ ನೋಡುವ ಪ್ರಯತ್ನ ಮಾಡಲಾಗುತ್ತದೆ.

ಬಸವಣ್ಣನನ್ನುಕುರಿತಾಗಿ ರಚನೆಯಾಗಿರುವ ಕಾವ್ಯ, ಪುರಾಣಗಳೆಲ್ಲವೂ ಬಸವಣ್ಣನನ್ನು ಒಬ್ಬ ಅವತಾರಿ ಪುರುಷನಂತೆ ಕಂಡಿವೆ. ದ.ರಾ.ಬೇಂದ್ರೆ ವಿರಚಿತ 'ತಲೆದಂಡ' ನಾಟಕವುಸಹ ಇದೇಹಾದಿಯಲ್ಲಿಯೇ ಮುನ್ನಡೆದಿದೆ. ಆದರೆ ಪಿ.ಲಂಕೇಶ, ಹೆಚ್.ಎಸ್.ಶಿವಪ್ರಕಾಶ, ಗಿರೀಶ್ ಕಾರ್ನಾಡ್, ಎಂ.ಎಂ.ಕಲಬುರ್ಗಿ, ಚಂದ್ರಶೇಖರ ಕಂಬಾರ ಮುಂತಾದವರು ಬಸವಣ್ಣನವರನ್ನು ಸಾಮಾಜಿಕ–ಧಾರ್ಮಿಕ ಸುಧಾರಕನಂತೆ ಚಿತ್ರಿಸಿದ್ದಾರೆ. ಆತನ ಸುಧಾರಣಾ ಚಳುವಳಿಗೆ ಸಮಕಾಲೀನ ಅರ್ಥ ಕೊಡಲು ಪ್ರಯತ್ನಿಸಿದ್ದಾರೆ. ಬಳಸಿದ ವಸ್ತು ಒಂದೇ ಆಗಿದ್ದರೂಸಹ ಅರ್ಥೈಸುವುದರಲ್ಲಿ ತಂತ್ರಗಾರಿಕೆಯಲ್ಲಿ ವಿಭಿನ್ನವಾಗಿದೆ. "ಜೀನ್ ಆವೆಯ (Jean Anouiln) ಅಸ್ತಿತ್ವವಾದ ಪ್ರಭಾವವು ಕನ್ನಡದ ಈ ನಾಟಕಕಾರರ ಮೇಲೆ ಸಾಕಷ್ಟಾಗಿದೆ. ಇದು ಅಂತರ ಸಂಸ್ಕೃತೀಕರಣದ ವಿಧಾನವನ್ನು ಕನ್ನಡ ನಾಟಕಗಳಲ್ಲಿ ತೊಡಗಿಸಲು ಸಹಕಾರಿಯಾಗಿದೆ."[೧] ಪ್ರಸ್ತುತ ಅಧ್ಯಾಯದಲ್ಲಿ ಇಂತಹ ಕೆಲವು ನಾಟಕಗಳ ವಸ್ತು ವಿವೇಚನೆಯನ್ನು ಮಾಡಲಾಗಿದೆ.

### ಲಂಕೇಶರ – ಸಂಕ್ರಾಂತಿ:

ಬಹುಮುಖ ವ್ಯಕ್ತಿತ್ವದ ಲಂಕೇಶರು ಕನ್ನಡದ ಅತ್ಯಂತ ಪ್ರತಿಭಾವಂತ ಬರಹಗಾರರು. ೧೨ನೆಯ ಶತಮಾನದ ಕರ್ನಾಟಕದಇತಿಹಾಸದಲ್ಲಿಯ ಅತ್ಯಂತ ಸಂಕೀರ್ಣವಾದ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಸ್ಥಿತಿಗಳನ್ನು ವಸ್ತುವನ್ನಾಗಿಟ್ಟುಕೊಂಡು

---

೧. ಡಾ॥. ಬಿ. ವಾಯ್ ಪಾಟೀಲ, ಕನ್ನಡ ಆಧುನಿಕ ನಾಟಕಗಳಲ್ಲಿ ಬಸವ ಪುರಾಣ. ಪುಟ ೬೭.

ರಚನೆಯಾಗಿರುವ ಇವರ ಸಂಕ್ರಾಂತಿ ನಾಟಕವು ಇತಿಹಾಸವನ್ನು ವರ್ತಮಾನದ ಸಂದರ್ಭಕ್ಕೆ ಪ್ರಸ್ತುತವಾಗುವಂತೆ ನಿರೂಪಿಸಿ ಕನ್ನಡದ ಪ್ರಮುಖ ನಾಟಕ ಕೃತಿಗಳಲ್ಲಿ ಸ್ಥಾನಪಡೆದಿದೆ.

"ಬಸವಣ್ಣನು ನಾಟಕದ ಕೇಂದ್ರವಸ್ತು. ಇಲ್ಲಿ ಈತನ ವ್ಯಕ್ತಿತ್ವವು ಪ್ರಾಚೀನ ಪ್ರತಿಮೆ ಅಥವಾ ನಿರಂತರ ಪ್ರತಿಮೆಯ ಮಾದರಿಗೆ ಬದ್ಧವಾಗಿದೆ. ಅದರಂತೆ ಪ್ರತಿಯೊಂದು ಪಾತ್ರವೂ ತನ್ನ ಸಾಮಾಜಿಕ ಜವಬ್ದಾರಿಯನ್ನು ಅರಿತಿದೆ. ಅಜ್ಞಾನದಿಂದ ಅರಿವಿನ ಕಡೆಗೆ ಪಾತ್ರಗಳು ಸಾಗುತ್ತವೆ. ನಾಟಕದೊಳಗಿನ ಎಲ್ಲಾ ಪಾತ್ರಗಳು ಎರಡು ಪ್ರಮುಖವಾದ ಘಟನೆಗಳ ಸುತ್ತಲೂ ತಿರುಗುತ್ತವೆ. ಅವುಗಳೆಂದರೆ, ರಾಜ್ಯ ಬೊಕ್ಕಸದಲ್ಲಿದ್ದ ಹಣವನ್ನು ಬಸವಣ್ಣನುಗಳೆಂದರೆ ದುರುಪಯೋಗ ಮಾಡಿದ್ದಾರೆನ್ನುವ ದೂರು ಮತ್ತು ರುದ್ರ ಮತ್ತು ಉಷೆಯರ ಪ್ರತಿಲೋಮ ವಿಧಾನದ ವಿವಾಹ. ಇವರದೇ ಪಾತ್ರಗಳು ಇತಿಹಾಸದ ವ್ಯಕ್ತಿಗಳಿಗೆ ಹೋಲಿಕೆಯಾಗುತ್ತದೆ. ಹೊಲೆಯರ ಹರಳಯ್ಯನ ಮಗನಿಗೂ ಬ್ರಾಹ್ಮಣ ಮಧುವರಸನ ಮಗಳಿಗೂ ಆದ ವಿವಾಹಕ್ಕೆ ಇದೊಂದು ಹೋಲಿಕೆಯ ಘಟನೆ. ನಾಟಕದ ಪರದೆ ಸರಿದಾಗ ಕೆಲವು ಶೂದ್ರರು ಗುಂಪಾಗಿ ಸೇರಿಕೊಂಡು ಸೆರೆ ಕುಡಿಯುತ್ತಾ ಹೆಣ್ಣು ಹಾಗೂ ಕುಡಿತದ ಅಮಲುಗಳ ಬಗ್ಗೆ ಹರಟೆ ಹೊಡೆಯುತ್ತಿರುವುದು ಕೇಳುತ್ತದೆ. ಹೊಲೆಯರ ಹಟ್ಟಿಯಿಂದಲೇ ನಾಟಕ ಶುರುವಾಗುವ ವಿಧಾನವೇ ಕೃತಿಕಾರನ ಮುಖ್ಯ ಕಾಳಜಿಯತ್ತ ಓದುಗರನ್ನು ಸೆಳೆಯುವುದರೊಂದಿಗೆ ಆ ಉದ್ದೇಶ ಸಾಧನೆಗೆ ಭದ್ರವಾದ ತಳಪಾಯವನ್ನು ಹಾಕಿಕೊಡುತ್ತದೆ."[೨]

"ನೂರು ತಲೆ ಮಾರವ್ವಂಗೆ ಕೊಟ್ಟ್ರೋ ಕೋಳಿ
ಹೊಲೇರುಜ್ಜ ನಾನ್ಹಣವ್ವ ಹೇಳಿ ಕೇಳಿ
ಹೆಂಡಕಂಡರು ಹಾಡಬೇಕು ನನ್ನಾ ಕೂಡ
ಬ್ಯಾಟೆಗೆ ಬಂದು ಹಿಡೀಬೇಕು ನನ್ನಾ ಜಾಡ
ಶರಣಾಗ್ಬಿಟ್ಟ ನಮ್ಮ ಬಸ್ಸಾರಿನಾಗ
ನಾನು ಸಹಿತ ಮಾತು ಕೊಟ್ಟೆ ಬಸವಣ್ಣಾಂಗ
ಮಾತುಕೊಟ್ಟ ಮೂರು ತಾಸು ತೆಪ್ಪಾಗಿದ್ದೆ
ಕ್ವಾಪ ಬ್ಯಾಡ ಅಂತ ಹೆಂಡಕ್ಕಡ್ಡಾ ಬಿದ್ದೆ..."[೩]

ಎಂದು ಹಾಡುವ ಉಜ್ಜನು ಬಸವಣ್ಣನ ಹೊಸ ತತ್ವಗಳನ್ನು ಒಪ್ಪಿದ ಮತ್ತು ಅದನ್ನು ಪಾಲಿಸಲಾಗದೆ ಒದ್ದಾಡಿದ ಹೊಲೆಯರ ಸ್ಥಿತಿಗೆ ಕನ್ನಡಿ ಹಿಡಿದಿದೆ. ಇಂತಹ ಈ ಸ್ಥಿತಿ ಬಸವಣ್ಣನು ಸಾಧಿಸಲು ಹೊರಟ ಬದಲಾವಣೆಯು ಇನ್ನೂ ಭ್ರೂಣಾವ್ಯಸ್ಥೆಯಲ್ಲಿಯೇ ಗರ್ಭಪಾತವಾಯಿತೆಂದು ಹೇಳುವುದು ವರ್ತಮಾನದ ಹಿನ್ನಲೆಯಲ್ಲಿ ಅನಿವಾರ್ಯವಾಗುತ್ತದೆ.

ಬಸವಣ್ಣನು ಯಾವ ವರ್ಗದ ಉದ್ಧಾರಕ್ಕೆ ಶ್ರಮಿಸಿದನೋ ಅದೇ ವರ್ಗದ ಕೆಲವು ಜನರ ಬಸವಣ್ಣನ ಪರವಾದ ಮಾತು ಹಾಗೂ ವಿರೋಧವಾದ ಮಾತುಗಳಿಗೆ ಹೊಲೆಯರ

---

೨. ಡಾ॥. ಬಿ. ವಾಯ್ ಪಾಟೀಲ, ಕನ್ನಡ ಆಧುನಿಕ ನಾಟಕಗಳಲ್ಲಿ ಬಸವ ಪುರಾಣ.ಪುಟ-೬೮

೩. ಪಿ. ಲಂಕೇಶ- ಸಂಕ್ರಾಂತಿ . ಪುಟ-೧೨.

ಕೇರಿ ಭೂಮಿಕೆಯಾಗುತ್ತದೆ. ಕಥಾನಾಯಕನಾದ ರುದ್ರನ ತಂದೆಗೆ ಇತ್ತೀಚೆಗೆ ಶರಣನಾದ ತನ್ನ ಮಗ, ಅವನ ಬದಲಾದ ನಡವಳಿಕೆ, ಬ್ರಾಹ್ಮಣರ ಹುಡುಗಿಯೊಂದಿಗೆ ಆತನ ಪ್ರೇಮ ಇವೆಲ್ಲವುಗಳ ಬಗೆಗೆ ಅಪಾರ ಹೆಮ್ಮೆ, ಅಭಿಮಾನ ಇದೆ. ಬಸವಣ್ಣನ ವ್ಯಕ್ತಿತ್ವದ ಬಗ್ಗೆ ಭಕ್ತಿ ಇದೆ. ಆದರೂ ತತ್ವಗಳ ಬಗ್ಗೆ ಅನುಮಾನವಿದೆ. ಆದರೆ ಅವನ ಮಗ ರುದ್ರನು ಬಸವಣ್ಣನೇ ಸ್ವತಃ ಬಂದು ಹೇಳಿ ಹೋದರೂ, ಇನ್ನೂ ಕುಡಿಯುತ್ತಿರುವ, 'ಜಂಗುಳಿದನ ದಂಗೆ' ವದರಾಡುತ್ತಿರುವ ತನ್ನ ಅಪ್ಪ ಮತ್ತು ಕುಲಭಾಂದವರ ಮೇಲೆ ಬೇಸರ ವ್ಯಕ್ತಪಡಿಸುತ್ತಾನೆ. ತಾವು ಶರಣರಾದರೆ 'ತಮ್ಮ ಸಾಲ ತೀರುತ್ತದೆಯೇ' ಎಂಬ ಆವರ ಪ್ರಶ್ನೆಗೆ ಮಾತ್ರ ರುದ್ರ ನಿರುತ್ತರನಾಗುತ್ತಾನೆ. ಆದರೂ ಬಡತನದ ನೋವಿನಲ್ಲಿರುವ ಆ ಜನರಿಗೆ ಶರಣನಾದ ತಮ್ಮ ಜಾತಿಯ ಹುಡುಗ ರುದ್ರ ಮತ್ತು ಬ್ರಾಹ್ಮಣರ ಮಗಳು ಉಷಾಳ ನಡುವಿನ ಪ್ರೇಮ ಪ್ರಸಂಗದ ಬಗ್ಗೆ ಹರಟೆ ಹೊಡೆಯುವುದೇ ಹಿತವೆನಿಸುತ್ತದೆ.

ಶಾಸ್ತ್ರಿಗಳ ಮಗಳು ಉಷಾಳಿಗೆ ರುದ್ರನ ದೇಹದ ವಾಸನೆಯ ಆಸೆ, ಅವನ ದೇಹದೊಳಗಿರುವ ಕಾಡು ಮೃಗದ ಒಡತಿಯಾಗುವ ಆಸೆ. ಈ ನಡುವೆ ನಾಟಕಕಾರನು ಹುಲಿಯ ಕಥಾರೂಪಕವನ್ನು ಬಳಸಿ (ಪುಟ-೧೯) ದೇಹ ಕೇಂದ್ರಿತ ಅಸ್ತಿತ್ವವಾದ ಸಮಯೋಚಿತ ಚರ್ಚೆಯನ್ನು ಮಾಡುತ್ತಾನೆ. "ಪ್ರೇಮಿಗಳಾದ ರುದ್ರ ಉಷೆಯರ ಸಂಭಾಷಣೆಯಲ್ಲಿ ಗಂಡು ಒರಟಾಗಿದ್ದರೂ, ಗ್ರಾಮ್ಯ ಮಾತಾಡಿದರೂ ಒಳಗೆ ಒಬ್ಬ ಶರಣನನ್ನು ರಚಿಸಿಕೊಳ್ಳುವವನಾಗಿ ಕಂಡರೆ, ಹೆಣ್ಣು ಸಭ್ಯ ಮಾತಾಡಿದರೂ ಅಸಭ್ಯ ಮೂದಲಿಕೆ ಕೇಳಿಬರುತ್ತದೆ."[೪] ಸತ್ಯವು ಅವಳಿಗೆ ದೈಹಿಕ ಅನುಭವಗಳ ಗುಣರೂಪ (Truth is the abstraction of physical experience) ಮಾತ್ರ. ರುದ್ರನನ್ನು ಸೇರಿ ಸುಖ ಪಡೆಯ ಬೇಕಾದರೆ ಅವನಲ್ಲಿ ಮೃಗತ್ವವನ್ನು ಬಡಿದೆಬ್ಬಿಸಬೇಕು. ಇದಕ್ಕೆ ಅವಳು ಕಂಡುಕೊಂಡ ಮಾರ್ಗ "ಭಂಡಾರದ ಹಣ ತಗೊಂಡು ಸೋಮಾರಿ ಜಂಗಮ ಜನಕೆ ರೊಟ್ಟಿ ಚೂರು ಹಾಕಿದ ಬಸವಣ್ಣ"(ಪುಟ ೨೭) ಎಂಬ ಆರೋಪ ಹೊರಿಸುವುದು. ಅವಳ ಮಾತಿನ ಮರ್ಮ ಅರಿಯದ ಅವನು ಆ ಕ್ಷಣದಲ್ಲಿ ಬಸವಣ್ಣನ ತತ್ವಗಳಿಂದ ದೂರ ಸರಿದು ಅವಳನ್ನು ಆಕ್ರಮಿಸುತ್ತಾನೆ. ಇದರೊಂದಿಗೆ ಅತ್ಯಾಚಾರದ ಆರೋಪಕ್ಕೆ ಗುರಿಯಾಗುತ್ತಾನೆ. ಸಂಕ್ರಾಂತಿಯ ದಿನದಂದು ಈ ಬಗ್ಗೆ ವಿಚಾರಣೆಗೆ ಒಳಪಡಿಸಿದಾಗ ಬಿಜ್ಜಳನ ಮುಂದೆ ಉಷಾಳು 'ಇದು ಪ್ರೇಮವಲ್ಲ ಬಲತ್ಕಾರ' ಎಂದು ಉತ್ತರ ನೀಡಿ ಮುಗ್ಧ ರುದ್ರನನ್ನು ಚಕಿತಗೊಳಿಸುತ್ತಾಳೆ. "ಅವಳು ಮೆಚ್ಚಿಕೊಂಡದ್ದು ಹೊಲೆಯರ ರುದ್ರನನ್ನಲ್ಲದೆ ಶರಣ ರುದ್ರನನ್ನಲ್ಲ"[೫] ಇದರ ಪರಿಣಾಮವಾಗಿ ಬಿಜ್ಜಳನು ರುದ್ರನ ತಲೆದಂಡವನ್ನು ಪಡೆಯುತ್ತಾನೆ. ಬಸವಣ್ಣನು 'ಇದು

೪. ಡಾ॥. ಬಿ. ವಾಯ್ ಪಾಟೀಲ, ಕನ್ನಡ ಆಧುನಿಕ ನಾಟಕಗಳಲ್ಲಿ ಬಸವ ಪುರಾಣ.ಪುಟ-೭೩

೫. ಡಾ॥ ಬಿ.ವಾಯ್.ಪಾಟೀಲ, ಕನ್ನಡ ಆಧುನಿಕ ನಾಟಕಗಳಲ್ಲಿ ಬಸವಪುರಾಣ.ಪುಟ-೭೩

ತಲೆದಂಡವಲ್ಲ ಕೊಲೆ' (ಪುಟ ೮೮) ಎಂದು ಅತೀವ ನೋವನನ್ನುಭವಿಸುತ್ತಾನೆ. ತುಳಿತಕ್ಕೊಳಗಾದವರನ್ನು ಶರಣರನ್ನಾಗಿಸಿ ಮುಖ್ಯವಾಹಿನಿಗೆ ತರಲು ಬಯಸಿ ಬಸವಣ್ಣನು ಮಾಡಲು ಬಯಸಿದ ಸಮ್ಯಕ ಕ್ರಾಂತಿ (ಸಂಕ್ರಾಂತಿ)ಯು ಬಿಜ್ಜಳನ ಸ್ವಾರ್ಥದ ಮುಂದೆ ವಿಫಲವಾಗುತ್ತದೆ.

ಕೊನೆಯದಾಗಿ, ನಾಟಕದ ಹೆಸರಿನ ಬಗ್ಗೆ ಒಂದೆರೆಡು ಮಾತು. ಸೂರ್ಯ ತನ್ನ ಸಂಚಲನೆಯ ಪಥವನ್ನು ಬದಲಾಯಿಸುವ ದಿನಕ್ಕೆ 'ಸಂಕ್ರಾಂತಿ' ಎನ್ನುತ್ತಾರೆ. ಆಗ ನಿಸರ್ಗದಲ್ಲಿ, ಋತುಮಾಸಗಳು ಬದಲಾವಣೆ ಆಗುತ್ತವೆ. ಬೆಳೆದು ನಿಂತ ಫಲಗಳನ್ನು ಕೊಯ್ಲಿಗೆ ಆರಂಭಿಸುವ ಸುಗ್ಗಿ ಹಬ್ಬವೂ ಹೌದು. ಇಲ್ಲಿ ಪ್ರತಿಯೊಂದು ಪಾತ್ರವು ಸಂಕ್ರಾಂತಿ ತರುವ ಬದಲಾವಣೆಯ ಬಗ್ಗೆ ಮಾತಾನಾಡುತ್ತವೆ. ಉಷಾ ಕೂಡ "ದಿಶಿ ಮಂದಾಯಿತೇ, ತೇಜೋ ತಕ್ಷಿನಸ್ಯಂ ರವೇ ರಪಿ" ಎನ್ನುತ್ತಾಳೆ. ಎಂದರೆ ದಕ್ಷಿಣಾಯದಿಂದ ತೇಜಸ್ಸು ಸ್ಫುರಿತನಾದ ರವಿ ತನ್ನ ದಿಕ್ಕನ್ನು ಬದಲಾಯಿಸುವ ಹಾಗೆ ಎಂದು. ಬಸವಣ್ಣನಿಗೆ ಸಂಕ್ರಾಂತಿ ಹಬ್ಬ ಇಡೀ ಸಮಾಜದಲ್ಲಿ ಆಗುವ ಬದಲಾವಣೆ. ಬಿಜ್ಜಳನಿಗೆ ತನ್ನ ಅಧಿಕಾರದಲ್ಲಿ ಏನೋ ಬದಲಾವಣೆ ಆಗಬಹುದೇನೋ ಎನ್ನುವ ಭಯ. ಇದಕ್ಕೆ ತನ್ನ ವ್ಯವಸ್ಥೆಯನ್ನು ರಕ್ಷಿಸಿಕೊಳ್ಳವುದಕ್ಕೆ ಬಸವಣ್ಣನ ಮೇಲಿನ ಮೋಹವನ್ನು ತ್ಯಜಿಸಿ ರುದ್ರನ ತಲೆದಂಡ ಪಡೆಯುವ ನಿರ್ಧಾರ ತೆಗೆದುಕೊಳ್ಳುತ್ತಾನೆ. ಆ ಮೂಲಕ ತಾನು ಯಾವ ಬದಲಾವಣೆಯ ಬಗ್ಗೆ ಹೆದುರುತ್ತಿದ್ದನೋ ಅದನ್ನು ನಿವಾರಿಸಿಕೊಳ್ಳಲು ಯತ್ನಿಸುತ್ತಾನೆ, ಉಷಾಳಿಗೆ ತನ್ನ ವೈದಿಕ ಬದುಕಿನಲ್ಲಿ ಆಗುವ ಬದಲಾವಣೆ, ರುದ್ರನಿಗೆ ಕೆಳವರ್ಗದ ಅವಮಾನದ ಬದುಕಿನಿಂದ ಮೇಲೇಳಲು ಸಹಾಯಕವಾಗುವ ಬದಲಾವಣೆ. ಆದರೆ, ನಿಸರ್ಗದಲ್ಲಿ ಮಾತ್ರ ಬದಲಾವಣೆ ಸಹಜವಾಗಿರುತ್ತದೆ. ಮನುಷ್ಯ ಲೋಕದಲ್ಲಿ ಬಲವಂತವಾಗಿತರುವ ಬದಲಾವಣೆಯಿಂದ ಅಲ್ಲೋಲ ಕಲ್ಲೋಲ ಉಂಟಾಗುತ್ತದೆ ಎಂಬುದನ್ನು ನಾಟಕ ಧ್ವನಿಸುತ್ತದೆ.

**ಹೆಚ್. ಎಸ್. ಶಿವಪ್ರಕಾಶರ – ಮಹಾಚೈತ್ರ**

ನಮ್ಮ ನಡುವಿನ ಅನುಭಾವಿ, ಕವಿ, ಪುರಾಣ, ಅಧ್ಯಾತ್ಮ, ತತ್ವಶಾಸ್ತ್ರ ಇವುಗಳಲ್ಲಿ ಅಪಾರ ಆಸಕ್ತಿಯಿಟ್ಟು ಕೊಂಡಿರುವ ಶಿವಪ್ರಕಾಶ್‌ರವರು ರಚಿಸಿರುವ ಮಹಾಚೈತ್ರ ನಾಟಕವು ಸಾಮಾನ್ಯ ಶ್ರಮಜೀವಿಗಳ ಸಮೂಹವನ್ನು ಕೇಂದ್ರವಾಗಿಸಿಕೊಂಡು ಒಂದು ಕಡೆ ಸಂಪೂರ್ಣ ಎಡ ಪಂಥೀಯವೂ ಆಗಿರದ ಅಥವಾ ಲೋಹಿಯಾ ವಿಚಾರ ಪರವೂ ಆಗಿರದ, ಬಸವ ಯುಗದ ಸಮುದಾಯವನ್ನು ರಂಗದ ಮೇಲೆ ಮೂಡಿಸುವ ಪ್ರಯತ್ನದ ಪ್ರಮುಖ ನಾಟಕವಾಗಿದೆ. ಇಲ್ಲಿ ಬಸವಣ್ಣನು ಒಂದು ಪಾತ್ರವಾಗಿ ಪಾತ್ರಗಳ ಸಮೂಹದಲ್ಲಿ ರಂಗದ ಮೇಲೆ ಪ್ರವೇಶಿಸದಿದ್ದರೂ ಈ ನಾಟಕದ ಜೀವಜ್ವಾಲೆಯಾಗಿ ಸ್ವಾತಂತ್ರ್ಯ ಮತ್ತು ಸಮಾನತೆಯ ಶಕ್ತಿಯಾಗಿ, ಅರ್ಥವಿಲ್ಲದ ಬದುಕಿಗೆ ಅರ್ಥ ಹುಡುಕಿಕೊಟ್ಟ ದಾರ್ಶನಿಕನಾಗಿ, ಒಳನಾಟಕದ

ಚೈತ್ರ ಚೇತನವಾಗಿ ಮೊದಲ ದೃಶ್ಯದಿಂದ ಕೊನೆಯವರೆಗೂ ಹರಿದುಕೊಂಡು ಬರುತ್ತಾನೆ. ಕಲ್ಯಾಣಕ್ರಾಂತಿಯ ನಂತರದ ಬಸವಣ್ಣನಿಲ್ಲದ ಕಲ್ಯಾಣದ ಸ್ಥಿತಿಯೇ ನಾಟಕದ ಮೊದಲನೆಯ ದೃಶ್ಯದ ಪ್ರಾರಂಭದಲ್ಲಿ ಶರಣರ ಗುಂಪು ಊರ ಹೊರವಲಯದಲ್ಲಿ ನಿಂತು ಹಾಡುವ ಹಾಡು, ಬಸವಣ್ಣನಿಲ್ಲದ ಕಲ್ಯಾಣದ ಸ್ಥಿತಿಯನ್ನು ವಿವರಿಸುತ್ತದೆ.

"ಇಹದ ಬಾಗಿಲಿನಿಂದ ಮಹದೂರ ಹೋದಾಗ ಕಲ್ಯಾಣ ಕತ್ತಲಾಯಿತು
ನಗುತ್ತಿರುವ ಹಸುಳೆಗಳು ಬಗಲಲ್ಲೇ ಮಡಿದಾಗ ಕೈಲಾಸ ಬತ್ತಲಾಯಿತು."

ಬಸವಣ್ಣನವರು ಕಲ್ಯಾಣ ಬಿಟ್ಟು ಹೋಗುವಾಗ ಹೇಳಿದ ಕೊನೆಯ ಮಾತುಗಳನ್ನು ಓಲೆ ಶಾಂತಯ್ಯ ಹಾಡುತ್ತಾನೆ;

"ಅರಸು ವಿಚಾರ, ಸಿರಿಯು ಶೃಂಗಾರ
ಸ್ಥಿರವಲ್ಲ ಮಾನವ."೧

ಅರಸೊತ್ತಿಗೆಯ ಮತ್ತು ಪಟ್ಟ ಭದ್ರರ ವಿಚಾರಗಳು ಕೇವಲ ಸಮಯ ಸಾಧಕತನದಿಂದ ಕೂಡಿದೆ ಎಂಬ ವಾಸ್ತವ ಸಂಗತಿಯೇ ಬಸವಣ್ಣನು ತಿಳಿಸಿ ಐಕ್ಯರಾಗಿದ್ದರೂ ನಂತರ ಶರಣರು "ಹರಳಯ್ಯನ ಮಗನಾದ ಶೀಲವಂತನಿಗೂ ಮತ್ತು ಮಧುವರಸನ ಮಗಳಾದ ಮಾಧವಿಗೂ ನಡೆದ ಪ್ರತಿಲೋಮ ವಿವಾಹದ ಬಗ್ಗೆ ಮಾತನಾಡುತ್ತಾ ಈ 'ನೀಚಕಾರ್ಯ'ವನ್ನು ಮಾಡಿಸಿದವನು ಬಸವಣ್ಣನೇ, ಇದರ ಪರಿಣಾಮ ಆತ ಮಹಾಭಂಢಾರಿ ಪದವಿಯನ್ನು ತೊರೆಯುವುದಲ್ಲದೆ ಕಲ್ಯಾಣದಲ್ಲಿ ಹಾಹಾಕಾರ ಏಳುವಂತಾಯಿತು. ಅದರ ಕ್ರೌರ್ಯವು ನಿಸರ್ಗದಲ್ಲಿಯೂ ಸಹ ಹಾಸುಹೊಕ್ಕಂತಾಯಿತು. ಎಲ್ಲೆಲ್ಲೂ ಹಸಿರಿಗೆ ಬದಲು ಕೆಂಪು, ಚಿಗುರಿಗೆ ಬದಲು ಚೂರಿ, ಹೂವಿಗೆ ಬದಲು ಸಾವು ಕಾಣಿಸುತ್ತದೆ. ರಕ್ತದ ಇಬ್ಬನಿ, ದೊಯ್ಯಂತಗಾಳಿ, ಕಿರಿಚಾಡುವ ಮಕ್ಕಳು ಇವು ಸಾಮಾನ್ಯ ಚಿತ್ರಗಳು."೨ ಬಸವಣ್ಣನಿಲ್ಲದ ಕಲ್ಯಾಣದಲ್ಲಿ ಶರಣರು ಸೌಮ್ಯವಾದಿಗಳು ಹಾಗೂ ಉಗ್ರವಾದಿಗಳಾಗಿ ಎರಡು ಗುಂಪಾಗಿ ಚದುರುವರು ಸೈನಿಕರು ಹಾಗೂ ಶರಣರ ನಡುವೆ ಹಿಂಸೆ ಹೆಚ್ಚುತ್ತದೆ. ಚನ್ನಬಸವಣ್ಣನ ನೇತೃತ್ವದ ಶರಣರ ಗುಂಪು ದಿಕ್ಕು ದೆಸೆ ಕಾಣದೆ ಚದುರಿಕೊಂಡು ಕಲ್ಯಾಣವನ್ನು ತೊರೆಯುತ್ತಾರೆ. ಈ ಸಮಯದಲ್ಲಿ 'ಕಾಲಜ್ಞಾನಿ'ಯ ಪಾತ್ರವು ಬಂದು

"ಪಶ್ಚಿಮದ ದಿಕ್ಕಿನಲ್ಲಿ ಹುಟ್ಟಿದ ಸೂರ್ಯನು
ಅಚ್ಚರಿ ಕೇಳಣ್ಣ ಕೆಟ್ಟ ಕಲಿಯುಗ ಬಂತು
ನೆಲವನ್ನು ಬರಡಾಗಿ ಗಗನಾದಿ ಹೊಲವಾಗಿ
ತೊಲಗಿದವು ದೇವರು ತಲೆಯನ್ನಾಡಿಸಿ
ನೀತಿಬಿಟ್ಟರು ಕೂಡಿ ತಾತಂದಿರು ಹುಟ್ಟಿದರು
ಘೋರ ಪ್ರಳಯಕ್ಕಿನ್ನು ಹುಟ್ಟುವ ನೋಡಣ್ಣ"

---

೧. ಹೆಚ್.ಎಸ್.ಶಿವಪ್ರಕಾಶ, ಮಹಾಚೈತ್ರ , ಪುಟ ೧

೨. ಡಾ॥. ಬಿ.ವಾಯ್‌ಪಾಟೀಲ, ಕನ್ನಡ ಆಧುನಿಕ ನಾಟಕಗಳಲ್ಲಿ ಬಸವ ಪುರಾಣ ಪುಟ-೮೫

ಎಂದು ಹಾಡಿ ಆ ಮೂಲಕ ಬಸವಣ್ಣನಿಲ್ಲದ ಕಲ್ಯಾಣವು ಮುಂದಿನ ದಿನಗಳಲ್ಲಿ ವಿಪ್ಲವವನ್ನು ಕಾಣಬೇಕಾಗುತ್ತದೆ ಎಂದು ಭವಿಷ್ಯ ನುಡಿಯುತ್ತದೆ.

ಎಲ್ಲಿ ಒಳಿತು ಇರುತ್ತದೆಯಲ್ಲಿ ಅಲ್ಲಿ ಕೆಡುಕರು ಸಹ ಇದ್ದೇ ಇರುತ್ತಾರೆ ಎಂಬುದು ಇತಿಹಾಸದಿಂದ ನಾವುಕಂಡು ಕೊಂಡಿದ್ದೇವೆ. ಹಾಗೆಯೇ ಬಸವಣ್ಣನಂತಹ ವಿಚಾರವಾದಿಯನ್ನು ದ್ವೇಷಿಸುವ ನಾರಾಯಣ ಕ್ರಮಿತ, ಮಂಗಳ ಗುಪ್ತ, ಆದಿನಾಥಯ್ಯ ಮುಂತಾದವರು ಸಾಂಪ್ರದಾಯಿಕತೆಯನ್ನು ಉಳಿಸಿಕೊಳ್ಳುವ ನೆಪದಲ್ಲಿ ಬಿಜ್ಜಳನಿಗೆ ಚಾಡಿ ಹೇಳುತ್ತಾರೆ. ಬಿಜ್ಜಳನಾದರೂ ಬಸವಣ್ಣನಿಂದ ತನ್ನ ಸಾಮ್ರಾಜ್ಯದ ಜನರೆಲ್ಲರೂ ಕಳ್ಳತನ, ವಂಚನೆ, ಸೂಳೆಗಾರಿಕೆಯನ್ನು ಬಿಟ್ಟು ಕಾಯಕ ತತ್ವಕ್ಕೆ ಬಾಗಿ ದುಡಿಮೆಯಲ್ಲಿ ದೈವವನ್ನು ಕಾಣುವ, ಆ ಮೂಲಕ ಭಂಡಾರದ ಸಂಪತ್ತು ಅಧಿಕವಾಗಿ ನಾಡು ಸಮೃದ್ಧವಾಯಿತೆಂಬ ಸತ್ಯವನ್ನು ಮರೆತು, ಬಸವಣ್ಣನನ್ನು ತನಗೆ ಆಶ್ರಯಕೊಟ್ಟ ಗಿಡವನ್ನೇ ನಾಶಮಾಡುವ ಕೋತಿಬಳ್ಳಿ(ಮಂಗನ ಬಳ್ಳಿ)ಗೆ ಹೋಲಿಸಿ ಕೃತಘ್ನತೆಯನ್ನು ತೋರುತ್ತಾನೆ. ಇಷ್ಟೇ ಅಲ್ಲದೆ 'ಒಂದಾನೊಂದು ರಾಜ್ಯ, ಅಲ್ಲೊಬ್ಬ ಪ್ರಭು ಮಂತ್ರವಾದಿ. ಜನರ ಮುಂದೆಯೇ ವಜ್ರವೈಡೂರ್ಯಗಳನ್ನು ಸೃಷ್ಟಿಸುತ್ತಿದ್ದನಂತೆ. ಆ ಮಂತ್ರವಾದಿಯ ಜೀವ ಒಂದು ಜೇನು ಗೂಡಿನಲ್ಲಿತ್ತು......'ಎಂಬ ಕಥೆಯನ್ನು ಹೇಳಿ ಆ ಮೂಲಕ ಬಸವಣ್ಣನೂ ಸಹ ಒಬ್ಬ ಮಂತ್ರವಾದಿ, ಆದರೆ ಅವನ ಜೀವ ಕೀಳುಜಾತಿಯ ಆಯಗಾರರ ಕೇರಿಯಲ್ಲಿದೆ ಎನ್ನುತ್ತಾನೆ. ಈ ಮೂಲಕ ಬಸವಣ್ಣನು ರಾಜ್ಯದ ಬೊಕ್ಕಸವನ್ನು ಬಳಸಿಕೊಂಡಿದ್ದಾನೆ. ಆತನೊಬ್ಬ ಮಂತ್ರವಾದಿ ಎಂದು ನಿರ್ಧರಿಸಿ ಕೊನೆಗೆ ಬಸವೇಶ್ವರರು ವಿರೋಧಿಸುತ್ತಿದ್ದ ಯಜ್ಞಗಳನ್ನು ನೆರವೇರಿಸಬೇಕೆಂದು ತೀರ್ಮಾನಿಸುತ್ತಾನೆ. ಇದು ಬಸವಣ್ಣನಿಗೆ ಅಪಾರ ನೋವನ್ನುಂಟು ಮಾಡುತ್ತದೆ.

ಬಸವಣ್ಣನು ಕಲ್ಯಾಣವನ್ನು ಬಿಟ್ಟುಹೋದಮೇಲೆ ಆತ ಜನ ಮಾನಸದಿಂದ ಅಳಿದು ಹೋಗುತ್ತಾನೆಂಬ ಹುಚ್ಚುಕಲ್ಪನೆಯು ಬಿಜ್ಜಳನಅಧಿಕಾರಿಗಳು ಹಾಗು ಪುರೋಹಿತರಿಗಿತ್ತು. ಆದರೆ ವಾಸ್ತವವಾಗಿ ಹೆಚ್ಚಿನ ಹಿಂಸೆ ನಡೆಯುತ್ತದೆ. ಹರಳಯ್ಯ, ಶೀಲವಂತ ಮತ್ತು ಮಧುವರಸರನ್ನು ಚಿತ್ರಹಿಂಸೆನೀಡಿ ಕೊಂದದ್ದರಿಂದ ಕ್ರೋದಗೊಂಡಿದ್ದ ಶರಣರ ಗುಂಪೊಂದು ಬಿಜ್ಜಳನ ಕೊಲೆ ಮಾಡಲು ಹೊಂಚುಹಾಕುತ್ತಾರೆ. ಈ ಸಂದರ್ಭವನ್ನು ನಾಟಕಕಾರನು ನೇರವಾಗಿ ಹೇಳದೆ ಬಿಜ್ಜಳನನ್ನು ದಕ್ಷಬ್ರಹ್ಮನಿಗೂ, ಶರಣರ ರೋಷವನ್ನು ವೀರಭದ್ರನಿಗೂ ಹೋಲಿಸಿ, ಕಾಳಭೈರವನ ಮಗನು ಶರಣ ಸಮೂಹದ ಮೈದುಂಬಿ ಅನ್ಯಾಯದ ರೂಪಕವಾದ ದಕ್ಷಬ್ರಹ್ಮ ಅಂದರೆ ಬಿಜ್ಜಳನನ್ನು ಹತ್ಯೆ ಮಾಡುತ್ತಾರೆ. ಇದರ ಪರಿಣಾಮವಾಗಿ ನಾಟಕದ ಕೊನೆಗೆ ಮಾಚಯ್ಯ ಹೇಳುವ,

'ಇಲ್ಲಿ ಯಜ್ಞ ನಾಶ, ಹೊರಗೆ ನಾಶದ ಯಜ್ಞ–
ಇತ್ತ ಅರಮನೆಗೆ ಬೆಂಕಿ, ಅತ್ತ ಮಹಾಮನೆಗೂ ಬೆಂಕಿ
ದೇವಾಲಯದ ಮಂದಿರವೆಲ್ಲ ಬೆಂಕಿ......"

ಎಂಬಂತಹ ದೃಶ್ಯ ಉಂಟಾಯಿತು. ಆದರೂ ಕೊನೆಯಲ್ಲಿ ಮಾಚಯ್ಯನು "ನಮ್ಮ ಕೈಗಳಲ್ಲಿ ಇಂತಹ ನೂರಾರು ಕಲ್ಯಾಣಗಳು ಅಡಗಿವೆ"[೮] ಎಂದು ಹೇಳುತ್ತಾನೆ. ಅವನ ಈ ಮಾತಿನಲ್ಲಿ ದುಡಿಯುವ ಕೈಗಳಲ್ಲಿ ಕಟ್ಟುವ ಶಕ್ತಿ ಅಡಗಿದೆ. ಬಸವಣ್ಣನು ತೋರಿದ ಮಾರ್ಗದಲ್ಲಿ ಸಾಗಿ ರಕ್ತ ಮೆತ್ತಿಕೊಂಡ ಕಲ್ಯಾಣದಲ್ಲಿ ಮತ್ತೆ ಹಸಿರಿನ ಮರಗಳು ಕಂಗೊಳಿಸುವಂತೆ ಮಾಡಿ 'ಮಹಾಚೈತ್ರ'ವನ್ನುಂಟು ಮಾಡಬಹುದೆಂಬ ಆಶಯ ವ್ಯಕ್ತವಾಗುತ್ತದೆ.

**ಗಿರೀಶ್ ಕಾರ್ನಾಡರ-ತಲೆದಂಡ**

ಕನ್ನಡಕ್ಕೆ ಏಳನೇ ಜ್ಞಾನಪೀಠ ಪ್ರಶಸ್ತಿ ತಂದು ಕೊಟ್ಟ ಗಿರೀಶ್ ಕರ್ನಾಡರು ಸುಪ್ರಸಿದ್ಧ ನಾಟಕಕಾರರು. ಅವರು ರಚಿಸಿದ 'ತಲೆದಂಡ' ನಾಟಕವು ಕನ್ನಡ ರಂಗಭೂಮಿ ಚರಿತ್ರೆಯಲ್ಲಿ ಅತ್ಯಂತ ಪ್ರಮುಖವಾದ ಸ್ಥಾನವನ್ನು ಹೊಂದಿದೆ. ಸುಮಿತ್ರಾ ಮುಖರ್ಜಿಯವರು ಕಾರ್ನಾಡರ ನಾಟಕಗಳನ್ನು ಪರಾಮರ್ಶಿಸುವ ಸಂದರ್ಭದಲ್ಲಿ "Girish Karnad has made major contribution to on going changes in the definitions and the constituents of Indian Culture through his theater work albeit it in different ways."[೯] ಎಂದು ಹೇಳಿರುವುದು ಕಾರ್ನಾಡರ ನಾಟಕ ಸಾಹಿತ್ಯ ಕೃಷಿಗೆ ಹಿಡಿದ ಕನ್ನಡಿಯಾಗಿದೆ.

ಇವರ 'ತಲೆದಂಡ' ನಾಟಕವು ಬಸವ-ಬಿಜ್ಜಳರ ಯುಗ, ಕಲ್ಯಾಣಕ್ರಾಂತಿಯನ್ನೇ ಕೇಂದ್ರವಾಗಿರಿಸಿಕೊಂಡು ರಚನೆಯಾಗಿದೆ. ಈ ಬಗ್ಗೆ ನಾಟಕಕಾರನೇ ಹೇಳುವಂತೆ "ನೋಯುವ ಹಲ್ಲಿಗೆ ನಾಲಿಗೆ ಮತ್ತೆ ಮತ್ತೆ ಹೊರಳುವಂತೆ ಪ್ರತಿಯೊಬ್ಬ ಕನ್ನಡಿಗ ಮತ್ತೆ ಮತ್ತೆ ಆ ಯುಗದ ಬೆರಗುಗೊಳಿಸುವ ಪ್ರತಿಭೆಗೆ, ಆ ಉತ್ಸಾಹಕ್ಕೆ, ಮೌಲಿಕ ಪ್ರಶ್ನೆಗಳನ್ನು ಕೇಳುವ ಎದೆಗಾರಿಕೆ, ಗೆಲುವಿಗೆ, ನೋವಿಗೆ ಮರಳುವುದು, ಅದನ್ನು ಹೊಸ ಸಂದರ್ಭದಲ್ಲಿ ಅರ್ಥೈಸಲು ಯತ್ನಿಸುವುದು ಅನಿವಾರ್ಯ"[೧೦]

ಪ್ರಸ್ತುತ ಸಂಪ್ರಬಂಧದಲ್ಲಿ ದ.ರಾ.ಬೇಂದ್ರೆ ವಿರಚಿತ ನಾಟಕವನ್ನು ಆಯ್ಕೆ ಮಾಡಿಕೊಂಡಿರುವುದು ಸರಿಯಷ್ಟೇ. 'ತಲೆದಂಡ' ಎಂಬ ಪದ ಕರ್ಣಸ್ಪರ್ಶವಾದೊಡನೆ ಕನ್ನಡದ ಸಹೃದಯ ಓದುಗರಿಗೆ ನೆನಪಾಗುವುದು ಕಾರ್ನಾಡರ ಈ ನಾಟಕದ ತಲೆಬರಹ. 'ತಲೆದಂಡ' ಎಂಬ ಪದವು ಬಸವಣ್ಣನವರ ವಚನದಿಂದ ಅಯ್ಕೆಯಾಗಿದ್ದರೂ ಸ್ವತಃ ಕಾರ್ನಾಡರೇ ಲೇಖಕನ ನುಡಿಯಲ್ಲಿ 'ನನಗೆ ನಾಟಕದ ಹೆಸರಾಗಿ ದೊರೆತದ್ದು ದ.ರಾ.ಬೇಂದ್ರೆ ಅವರಿಂದ' ಎಂದು ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು.

ಕಾರ್ನಾಡರ ಈ ನಾಟಕದ ಪ್ರಾರಂಭದ ದೃಶ್ಯವು ಅಗ್ರಹಾರದಲ್ಲಿಯ ಒಬ್ಬ ಬ್ರಾಹ್ಮಣ ಮುದುಕನ ಚಡಪಡಿಕೆಯೊಂದಿಗೆ ಪ್ರಾರಂಭವಾಗುತ್ತದೆ. ಮನೆ ಮಗ ಜಗ್ಗಣ್ಣನೇ ತಂದೆಗೆ ದೊಡ್ಡ ತಲೆನೋವು. ಆತ ತನ್ನ ತಂದೆಗೆ ನೆಮ್ಮದಿಯನ್ನು ತರುವುದಿಲ್ಲ. ತಂದೆ ಸಂಪ್ರದಾಯಸ್ಥ

---

೮. ಡಾ॥. ಬಿ.ವಾಯ್‌ಪಾಟೀಲ, ಕನ್ನಡ ಆಧುನಿಕ ನಾಟಕಗಳಲ್ಲಿ ಬಸವ ಪುರಾಣ ಪುಟ-೮೮, ೮೯

೯. Sumitra Mukerji: Encounters with cultures; contemporary Indian culture and interculturalism in seagull theater, Quaterterly issue; 4 December 1994, page no.೭

೧೦. ಗಿರೀಶ್ ಕಾರ್ನಾಡ, 'ಲೇಖಕನ ನುಡಿ' ತಲೆದಂಡ

ಬ್ರಾಹ್ಮಣನಾದರೆ ಮಗನು ಬಸವಣ್ಣನವರ ಸಂಪ್ರದಾಯ ವಿರೋಧಿ ಚಳುವಳಿಯಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದ. ಶಾಸ್ತ್ರಿಗಳ ನೆರೆಮನೆಯ ಭಾಗೀರಥಿ ಹೇಳುವಂತೆ "ಆ ಬಸವಣ್ಣಗರೆ ತಿಳೀಬಾರದ? ಯಾರ ಮನೀಗೆ ಹೋದರೂ ಇದಾಕತಿ, ಅಪ್ಪ-ಮಗ್ಗ ಜಗಳ ಅಣ್ಣ ತಮ್ಮಂದಿರೊಳಗ ಜಗಳ" ಮುದುಕ ಶಾಸ್ತ್ರಿಗೆ ತನ್ನ ಮಗ ಶರಣನಾಗಿರುವುದು ಬೇಡವಾದ ಸಂಗತಿ, ಏಕೆಂದರೆ ತಾನು ಸತ್ತಾಗ ತನ್ನ ಅಪರಕರ್ಮಗಳನ್ನು ಮಾಡಲು ಮಗ ಬ್ರಾಹ್ಮಣನಾಗಿಯೇ ಉಳಿಯಬೇಕೆಂಬುದು ಅವನ ಆಸೆ. ಈ ನಡುವೆ ಬಿಜ್ಜಳನ ಮಗ, ರಾಜಕುಮಾರ ಸೋವಿದೇವನು ತನ್ನ ತಂದೆ ಮತ್ತು ಮಹಾಮಂತ್ರಿ ಬಸವಣ್ಣನಿಲ್ಲದಿದ್ದಾಗ ರಾಜ್ಯ ಬೊಕ್ಕಸದಲ್ಲಿಯ ಹಣವನ್ನು ಲೆಕ್ಕಹಾಕಲು ಪ್ರಯತ್ನಿಸಿದಾಗ ಮಲ್ಲಬೊಮ್ಮ ಮತ್ತು ಜಗದೇವರು ಕೂಡಿ ಶರಣರ ಗುಂಪನ್ನು ಸೇರಿಸಿ, ಬಸವಣ್ಣ ಬರುವವರೆಗೂ ಬೊಕ್ಕಸಕ್ಕೆ ಕಾವಲಿದ್ದರು.

ಪುರೋಹಿತಶಾಹಿವರ್ಗವು ಸೋವಿದೇವನಲ್ಲಿ ಬಸವಣ್ಣನಬಗೆಗೆ ಕಿವಿಯೂದಿದರೂ ಸಹ ಕಾರ್ನಾಡರ ನಾಟಕದ ಬಿಜ್ಜಳನು ಬಸವಣ್ಣನವರ ರಾಜಕೀಯ ಮತ್ತು ಧಾರ್ಮಿಕ ಅನ್ವೇಷಣೆಗಳನ್ನು ಮೆಚ್ಚುತ್ತಾನೆ.

"ತಾನೂ ಬಸವಣ್ಣನ ಶರಣ ಧರ್ಮವನ್ನು ಅಪ್ಪಿಕೊಳ್ಳುವ ಆಸೆ ಇದ್ದರೂ, ರಾಜನಾಗಿ ಮತ್ತು ರಾಜಕೀಯವಾಗಿ ಅದು ಸಾಧ್ಯವಾಗುವುದಿಲ್ಲ, ಏಕೆಂದರೆ ಬಸವಣ್ಣ ಬೋಧಿಸಿದ ಸಪ್ತನೀತಿಗಳನ್ನು ಪಾಲಿಸಲು ಆಗಲಿಕ್ಕಿಲ್ಲವೆಂಬ ಭಯ. ಕಳಬೇಡ ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯ ಬೇಡ......... ಇವೆಲ್ಲವುಗಳನ್ನು ರಾಜಕೀಯ ವ್ಯವಸ್ಥೆಯಲ್ಲಿ ಪರಿಪಾಲಿಸಲು ಸಾಧ್ಯವೇ? ಅವನು ನಂಬಿಕೊಂಡ ಒಂದೇ ಒಂದು ಸತ್ಯ ಯಾವುದೆಂದರೆ "ನಾ ಇದ್ದೀನಿ ದೇವರಿಲ್ಲ' ಈ ನಂಬಿಕೆಯಲ್ಲಿ ಬಿಜ್ಜಳನ ಪ್ರವೃತ್ತಿ ಪ್ರತ್ಯಕ್ಷವಾಗುತ್ತದೆ..... ಶರಣರ ನಾಯಕ ಬಸವಣ್ಣ, ರಾಜಕೀಯ ನಾಯಕ ಬಿಜ್ಜಳ, ಬಿಜ್ಜಳನು ಕಾನೂನು ಮತ್ತು ಖಡ್ಗಗಳನ್ನು ಉಪಯೋಗಿಸಿ ರಾಜ್ಯಭಾರ ಮಾಡಿದರೆ, ಬಸವಣ್ಣನು ಅದರ ವಿರುದ್ಧವಾಗಿ ದಯೆ ಮತ್ತು ಬೋಧನೆಯಿಂದ ಜನರ ಹೃದಯ ಸಾಮ್ರಾಜ್ಯದ ದೊರೆಯಾಗುತ್ತಾನೆ. ರಾಜಕೀಯವು ಬಿಜ್ಜಳನ ಗುಣವಾದರೆ, ಅಂತಃಕರುಣೆ ಬಸವಣ್ಣನ ಗುಣವಾಗಿದೆ.[೧೧] ಹೀಗಿರುವಾಗ ಬಸವಣ್ಣನು ತನ್ನ ಮೇಲೆ ಸೋವಿದೇವನು ಹೊರಿಸಿದ ಬಂಢಾರದ ಹಣದ ದುರುಪಯೋಗದ ಆಪಾದನೆಯಿಂದ ಬೇಸರಗೊಂಡು, ಬೊಕ್ಕಸದ ಲೆಕ್ಕವನ್ನು ಹಿಂದಿರುಗಿಸಿ ರಾಜನಿಗೆ ಬೀಗದ ಕೈ ಒಪ್ಪಿಸಿ ತಾನು ಶರಣರ ಅನುಭಾವ ಮಂದಿರದಲ್ಲಿ ಪೂರ್ಣ ಪ್ರಮಾಣದಲ್ಲಿ ಅರ್ಪಿಸಿಕೊಳ್ಳುವ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಇವರಿಬ್ಬರ ವಾದವು ಪರಸ್ಪರ ವಿರುದ್ಧ ದಿಕ್ಕಿಗೆ ಸಾಗುತ್ತದೆ. ಈ ನಡುವೆ ಜಗದೇವನು ತನ್ನ ತಂದೆಯನ್ನು ಕಳೆದುಕೊಳ್ಳುತ್ತಾನೆ. ತಂದೆಯ ಕರ್ಮಾದಿಗಳು ಮುಗಿದನಂತರ ಮಾನಸಿಕ ಗೊಂದಲಕ್ಕೆ ಸಿಲುಕುತ್ತಾನೆ.

---

೧೧. ಡಾ॥ ಬಿ.ವಾಯ್‌ಪಾಟೀಲ, ಕನ್ನಡ ಆಧುನಿಕ ನಾಟಕಗಳಲ್ಲಿ ಬಸವ ಪುರಾಣ . ಪುಟ.೩೫

ಈ ನಡುವೆ ಹರಳಯ್ಯ ಮಧುವರಸರ ಮಕ್ಕಳಾದ ಶೀಲವಂತ ಮತ್ತು ಕಲಾವತಿಯರ ನಡುವಿನ ಪ್ರತಿಲೋಮ ವಿವಾಹವು ಬಸವ–ಬಿಜ್ಜಳರ ನಡುವಿನ ಕಂದಕವನ್ನು ಮತ್ತಷ್ಟು ಹೆಚ್ಚಿಸುತ್ತದೆ. ಈ ವಿಪರೀತ ವಿವಾಹದ ಫಲವಾಗಿ ಕಲ್ಯಾಣದಲ್ಲಿ ದೊಂಬಿ, ಜಗಳ, ರಕ್ತಪಾತಗಳುಂಟಾಗಿ ಯುವರಾಜ ಸೋವಿದೇವ ಮತ್ತು ದಾಮೋದರ ಭಟ್ಟರು ಹೊಂಚುಹಾಕಿ ಬಿಜ್ಜಳನ ವೈಯಕ್ತಿಕ ರಕ್ಷಣೆಯನ್ನು ದುರ್ಬಲಗೊಳಿಸಿ ಬಿಜ್ಜಳನನ್ನು ಬಂಧನದಲ್ಲಿರಿಸಿದ ಸೋವಿದೇವನು ಈಗ ಕಲ್ಯಾಣದ ದೊರೆ ತಾನೇ ಎಂದು ಪ್ರಕಟಿಸುತ್ತಾನೆ.

ತನ್ನ ಮಗನ ಅಧಿಕಾರದದಾಹವು ಬಿಜ್ಜಳನ ಕಣ್ಣುತೆರೆಸುತ್ತದೆಯಾದರೂ ಅಷ್ಟು ಹೊತ್ತಿಗಾಗಲೇ ಕಾಲ ಮೀರಿಹೋಗಿತ್ತು. ರಾಜಕೀಯ ಮತ್ತು ಸನಾತನೆಯು ಕ್ರೌರ್ಯ ಹರಳಯ್ಯ ಮತ್ತು ಮಧುವರಸರ ತಲೆದಂಡವನ್ನು ಪಡೆಯುತ್ತದೆ.

ಗಿರೀಶ್ ಕಾರ್ನಾಡರು ಮಧ್ಯಯುಗದ ಘಟನೆಯನ್ನು ವರ್ತಮಾನದ ನುಡಿಯನ್ನಾಗಿ ಮಾಡುವುದರಲ್ಲಿ ಬೆಚ್ಚಬಹುದಾದ, ಮೆಚ್ಚಬಹುದಾದ ತಂತ್ರವನ್ನು ಬಳಸಿದ್ದಾರೆ" ಇದರಲ್ಲಿ ಪೂರ್ಣತೆಯ ಯೋಜನೆ ಇದೆ. ಈ ನಾಟಕವು ಕೇವಲ ಹನ್ನೆರಡನೆಯ ಶತಮಾನದ ಜನಜೀವನದ ದಾಖಲೆಯಾಗಿರದೆ, ಬದುಕಿನ ಅರ್ಥದರಿವಿನ ಒಳನುಡಿಯೂ ಆಗಿದೆ. ಮಿಥ್ ವಿಮರ್ಶಾಮಾರ್ಗವು ಈ ಐತಿಹಾಸಿಕ ಪ್ರಸಂಗದಲ್ಲಿ ನಿರಂತರವಾಗಿ ಉಳಿಯುವ ಸಾಂಸ್ಕೃತಿಕ ಅಂಶಗಳನ್ನು ಹುಡುಕುತ್ತದೆ. ಈ ನಾಟಕವು ಮಿಥ್ ವಿಮರ್ಶಕರಿಗೆ ಸಾಂಸ್ಕೃತಿಕ ವಾತಾವರಣದ ಕೆಲವು ನಿರ್ಣಾಯಕ ಸೂತ್ರಗಳನ್ನು ದೊರಕಿಸುತ್ತದೆ.

## ಚಂದ್ರಶೇಖರ ಕಂಬಾರರ-ಶಿವರಾತ್ರಿ

ಸಿರಿಗನ್ನಡದೇವಿಯ ಸಿರಿಮುಡಿಗೆ ಎಂಟನೇ ಜ್ಞಾನಪೀಠ ಪ್ರಶಸ್ತಿಯ ಮುಕುಟ ಮಣಿಯನ್ನು ತೊಡಿಸಿದ ಚಂದ್ರಶೇಖರ ಕಂಬಾರರು ಕವಿಯಾಗಿ, ಜಾನಪದ ವಿದ್ವಾಂಸಕರಾಗಿ, ನಾಟಕಕಾರರಾಗಿ ಕಾದಂಬರಿಕಾರರಾಗಿ, ಸಿನಿಮಾ ನಿರ್ದೇಶಕರಾಗಿ, ಸಂಗೀತಕಾರರಾಗಿ ಖ್ಯಾತರಾದವರು. ಕಂಬಾರರು ನಮ್ಮ ನಡುವಿನ ಧೀಮಂತ ಸಾಹಿತಿಯಾಗಿದ್ದಾರೆ. ಬೇಂದ್ರೆಯವರನ್ನು ಹೊರತು ಪಡಿಸಿದರೆ ಸಮರ್ಥವಾಗಿ ಜಾನಪದವನ್ನು ಸಾಹಿತ್ಯಿಕವಾಗಿ ದುಡಿಸಿಕೊಂಡ ಮತ್ತೊಬ್ಬ ಸಾಹಿತಿ ನಮಗೆ ನಮ್ಮ ಸಾಹಿತ್ಯ ಪರಂಪರೆಯಲ್ಲಿ ಕಾಣಸಿಗುವುದಿಲ್ಲ. ಕಂಬಾರರು ಮಾತ್ರ ಈ ಸ್ಥಾನವನ್ನು ಅಲಂಕರಿಸಲು ಅರ್ಹರಾಗಿದ್ದಾರೆ. ಹಿರಿಯ ನಾಟಕಕಾರರಾದ ಶ್ರೀಯುತರ ಶಿವರಾತ್ರಿ ನಾಟಕವು ಇವರ ಸಾಹಿತ್ಯ ಕೃಷಿಯ ಮತ್ತೊಂದು ಸಮೃ ಪಸಲು. "ಕುವೆಂಪು ಅವರ ಸ್ಮಶಾನ ಕುರುಕ್ಷೇತ್ರ ಹಾಗೂ ವಿಲಿಯಟನ್ ('ಮರ್ಡರರ್ ಇನ್ ದ ಕ್ಯಾಥಡ್ರಲ್') ನಾಟಕಗಳನ್ನು ಮತ್ತು ಎರಡನೆಯ ಮಹಾಯುದ್ಧದ ಕೊನೆಯ ದಿನದ ಕರಾಳ ಮೃತ್ಯುನೃತ್ಯವನ್ನು ಅದ್ಭುತವಾಗಿ ದಾಖಲಿಸುವ 'ದ ಲಾಂಗೆಸ್ಟ್ ಡೇ' ಚಲನಚಿತ್ರವನ್ನು ನೆನಪಿಗೆ ತರುವ 'ಶಿವರಾತ್ರಿ' ನಾಟಕ ಕಂಬಾರರ ನೂತನ, ಅರ್ಥಪೂರ್ಣ ಪ್ರಯೋಗ; ಹಾಗೂ ಕನ್ನಡ ನಾಟಕ ಕ್ಷೇತ್ರಕ್ಕೆ ಅವರಿತ್ತಿರುವ ಮೌಲಿಕ ಕೊಡುಗೆ.

ಕನ್ನಡ ಸಾಹಿತ್ಯದಲ್ಲಿ ಬಸವಣ್ಣ ಮತ್ತು ಬಿಜ್ಜಳರನ್ನೊಳಗೊಂಡಂತೆ ಈಗಾಗಲೇ ಅನೇಕ ಕಾದಂಬರಿಗಳು ಹಾಗೂ ನಾಟಕಗಳು ರಚನೆಯಾಗಿವೆ. ಇವುಗಳಲ್ಲಿ ಬಹುತೇಕವುಗಳು ಬಸವಣ್ಣನವರ ಸಮಾನತೆಯ ತತ್ವವನ್ನು ಬಿಂಬಿಸಿ ಸಮಾಜದ ಕಟ್ಟಕಡೆಯೂ ವ್ಯಕ್ತಿಯೂ ಕಾಯಕ ತತ್ವದ ಮೂಲಕ ತಲೆಯೆತ್ತಿ ಬದುಕಲು ಪ್ರೇರಣೆ ನೀಡಿ ಕೊನೆಗೆ ತೆತ್ತ 'ದಂಡ'ವನ್ನು ಕುರಿತೇ ಹೆಚ್ಚಾಗಿ ಬೆಳಕುಚೆಲ್ಲಿದೆ. ಆದರೆ ಕಂಬಾರರು ಇದಕ್ಕಿಂತ ಭಿನ್ನವಾಗಿ ಜಾನಪದೀಯ ನೆರಳಿನಲ್ಲಿ ಬಿಜ್ಜಳ ಮತ್ತು ಬಸವಣ್ಣನ ನಡುವಿನ ವೈಚಾರಿಕ ಸಂಘರ್ಷ ಈ ನಿಟ್ಟಿನಲ್ಲಿ ಬಿಜ್ಜಳನ ದೃಷ್ಟಿಕೋನದ ಬಗೆಗೆ ಹೆಚ್ಚು ಗಮನ ಹರಿಸಿದ್ದಾರೆ.

ನಾಟಕದ ಪ್ರಾರಂಭದಲ್ಲಿ ಬರುವ ಸೂತ್ರಧಾರನು ಹೇಳುವ "ಮಾಂಡಳಿಕನಾಗಿದ್ದ ಬಿಜ್ಜಳ ಸದ್ದಿಲ್ಲದೆ ಚಾಲುಕ್ಯ ಸಾಮ್ರಾಜ್ಯವನ್ನು ಆಕ್ರಮಿಸಿ, ಮಂಗಳವೇಡೆಯಿಂದ ಕಲ್ಯಾಣಕ್ಕೆ ಬಂದ ಅವನಿಗೂ ಕಲ್ಯಾಣ ಹೊಸದು; ಆಯವ್ಯಯದ ವಿಚಾರದಲ್ಲಿ ಯಾರ ಮೇಲೂ ನಂಬಿಕೆ ಇರಲಿಲ್ಲ ಬಿಜ್ಜಳನಿಗೆ ನಂಬಿಕಸ್ಥನಾದ ಬಸವಣ್ಣ ಕಲ್ಯಾಣಕ್ಕೆ ಬಂದ (ಪುಟ-೧೭) ಎಂಬ ಮಾತುಗಳು ಕಲ್ಯಾಣ ಚಾಲುಕ್ಯರ ಚರಿತ್ರೆಯ ಪುಟಗಳನ್ನು ನೆನಪಿಸುತ್ತದೆ. "ಚಿನ್ನದ ಸುತ್ತ ಆಸೆ ಆಮಿಷಗಳಿರುತ್ತವೆ, ಮಣ್ಣಿನ ಸುತ್ತ ಮನುಷ್ಯರಿರುತ್ತಾರೆ"[೧೨] ಎಂಬ ಸೂತ್ರಧಾರನ ಮಾತು ಪರೋಕ್ಷವಾಗಿ ಬಿಜ್ಜಳ-ಬಸವಣ್ಣನವರ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುತ್ತದೆ.

---

೧೨. ಚಂದ್ರಶೇಖರ ಕಂಬಾರ,ಶಿವರಾತ್ರಿ -ಪುಟ-೦೩

ನಾಟಕದ ಕೇಂದ್ರ ಘಟನೆಯು ಸೂಳೆ ಸಾವಂತ್ರಿಯ ಮನೆಯಲ್ಲಿ ನಡೆಯುತ್ತದೆ. ಸಾವಂತ್ರಿಯಂಥ ಸೂಳೆಯಲ್ಲಿಯು ಸಹ ಬಸವಣ್ಣನ 'ಕಾಯಕವೇ ಕೈಲಾಸ' ಎಂಬ ತತ್ವ ನೆಲೆಗೊಂಡಿತ್ತು ಎಂಬುದನ್ನು ಸೂಚಿಸಲು ನಾಟಕಕಾರ ಕಂಬಾರರು ಈ ವಿಧಾನವನ್ನು ಬಳಸಿಕೊಂಡಿದ್ದಾರೆ. ಮುಗ್ಧ ಸಂಗಯ್ಯನೆಂಬ ಶರಣನು ದಾಮೋದರನು ಕದ್ದ ರತ್ನದ ಸರವನ್ನು ಹಿಡಿದುಕೊಂಡು ಸಾವಂತ್ರಿ ಮನೆ ಪ್ರವೇಶಿಸುವುದು ಮತ್ತು ನಾಡನ್ನಾಳುವ ದೊರೆ ಬಿಜ್ಜಳನು ಸೂಳೆ ಕಾಮಾಕ್ಷಿಯೊಂದಿಗೆ ದೇಹ ಸುಖವನ್ನನುಭವಿಸಲು 'ಶಿವರಾತ್ರಿ'ಯ 'ಕರಾಳ ರಾತ್ರಿಯನ್ನು' ರಸರಾತ್ರಿ'ಯನ್ನಾಗಿಸಿಕೊಳ್ಳಲು ಸೂಳೆ ಸಾವಂತ್ರಿಯ ಮನೆ ಪ್ರವೇಶಿಸುವುದು ಅಂದಿನ 'ಕಲ್ಯಾಣ' ಎರಡು ವಿಭಿನ್ನ ಮುಖಗಳನ್ನು ಪರಿಚಯಿಸುತ್ತದೆ.

ಈ ಮೊದಲು ಕೂಡ ಬ್ರಾಹ್ಮಣ ದಾಮೋದರನು ತನ್ನ ತಂದೆಯ ಮಾತಿನಂತೆ ಅರಮನೆಯಿಂದ ಕದ್ದ ರತ್ನದ ಸರವನ್ನು ಶರಣೆ ಕಾಶವ್ವನ ಮನೆಯಲ್ಲಿ ಬಿಟ್ಟಾಗ ಆ ಸರವು ಹೆಗ್ಗಣ ಸತ್ತ ವಾಸನೆ'ಯನ್ನು ಹರಡಿ ನಿರಾಕರಿಸಲ್ಪಟ್ಟಿದೆ. ಅಂದರೆ ಕೋಟೆ ಕಟ್ಟಿ ಮೆರೆಯಬೇಕೆಂಬ ತುಡಿತವುಳ್ಳ ಬಿಜ್ಜಳನಿಗೆ ಸಿರಿಕನಕಗಳೇ ಮೇಲ್ಮೆಯಾಗಿತ್ತೋ ಅದೇ ಕನಕವು ರತ್ನಗಳು ಬಸವಣ್ಣನ ತತ್ವಗಳಿಂದುಂಟಾದ ಕ್ರಾಂತಿಯಿಂದಾಗಿ ಶ್ರೀಸಾಮಾನ್ಯರಿಂದ ಹಿಡಿದು ಒಬ್ಬ ವೇಶ್ಯೆಯ ಮುಂದೆ ಮೌಲ್ಯ ಕಳೆದು ಕೊಳ್ಳುತ್ತದೆ. ಸತ್ತ ಹೆಗ್ಗಣಕ್ಕೆ ಸಮವಾಗುತ್ತದೆ.

ಹರೆಯದ ಶರಣ ಸಂಗಯ್ಯನು ಶಿವರಾತ್ರಿಯಂದು ಶಿವಪೂಜೆ ಮಾಡುವುದನ್ನು ಬಿಟ್ಟು ದಾಮೋದರನು ಕೊಟ್ಟ ರತ್ನದ ಸರದೊಂದಿಗೆ ಸೂಳೆ ಸಾವಂತ್ರಿಯ ಮನೆಗೆ ಹೋಗುವುದು, ತನಗೆ ಕಾಮಾಕ್ಷಿಯೇ ಬೇಕು ಎನ್ನುವುದು, ಆನಂತರ ಕಾಮಕ್ಷಿಯೊಂದಿಗೆ 'ಲಿಂಗಪೂಜೆ ಮಾಡಬೇಕೆಂದು ಬಯಸುವುದು, ಆ ಕ್ಷಣಕ್ಕೆ ಸೋಜಿಗವಾಗಿ ಕಂಡರೂ ಸಹ ನಾಟಕವು ಮುಂದುವರಿದಂತೆ ಸಾವಂತ್ರಿ ಮತ್ತು ಕಾಮಾಕ್ಷಿಯ ಮಾತುಗಳ ಮೂಲಕ ವೇದ್ಯವಾಗುವ ಅವರ 'ಶರಣ ತತ್ವ' ದಿಂದಾಗಿಯೇ ಸಂಗಯ್ಯನು ಆ ಸ್ಥಳವನ್ನು ಪೂಜೆಗಾಗಿ ಆಯ್ದುಕೊಂಡಿರುವುದು ಸ್ಪಷ್ಟವಾಗುತ್ತದೆ. "ಸಾವಂತ್ರಿಯು ಕಾಯಕ ಧರ್ಮವನ್ನು ಅನುಸರಿಸಿದರೆ, ಕಾಮಾಕ್ಷಿಯು ತನ್ನ ಒಂದು ದಿನದ ದೇಹಸುಖಕ್ಕೆ ಸಂಗಯ್ಯನು ತಂದ ರತ್ನದ ಹಾರವನ್ನು ಸ್ವೀಕರಿಸಿದರೆ ಹೆಚ್ಚು ಬೆಲೆ ತೆಗೆದುಕೊಂಡಂತಾಗುತ್ತದೆಂದು ಅದನ್ನು ನಿರಾಕರಿಸುತ್ತಾಳೆ. ಸಾವಂತ್ರಿಯು ಬಹುಮೌಲ್ಯವುಳ್ಳ ಆ ಸರವನ್ನು ಒಂದು ಸಾಧಾರಣ ಮಾಡದಲ್ಲಿ ಎಸೆಯುತ್ತಾಳೆ".[೧೩]

"ಎಲ್ಲಿ ಐಶ್ವರ್ಯದ ವ್ಯಾಖ್ಯೆಯೇ ಬದಲಾಗಿದೆಯೋ ಅಲ್ಲಿ ಸಂಗಯ್ಯ ತನ್ನ ಆವಾಸ ಸ್ಥಾನವನ್ನು ತೆರೆಯುತ್ತಾನೆ. ಆಗ ಕಾಮಾಕ್ಷಿಯಂಥ ಸುಂದರಿ ಕೂಡ ಅವನ ಸೇವೆಗೆ ನಿಂತು ಸೌಂದರ್ಯದ ವ್ಯಾಖ್ಯೆಯನ್ನು ಬದಲಿಸುತ್ತಾಳೆ."[೧೪]

---

೧೩. ಎ.ಬಿ.ಮಾಧವ ಕುಲಕರ್ಣಿ ಹಿನ್ನುಡಿ–ಶಿವರಾತ್ರಿ.ಪುಟ ೯೫.
೧೪. ಎ.ಬಿ.ಮಾಧವ ಕುಲಕರ್ಣಿ ಹಿನ್ನುಡಿ–ಶಿವರಾತ್ರಿ

ಸಂಗಯ್ಯ, ಸಾವಂತ್ರಿ, ಕಾಮಾಕ್ಷಿಯ ನಡವಳಿಕೆಯ ಮುಂದೆ ಬಸವ ತತ್ವದ ಬಗ್ಗೆ ಧನ್ಯತಾ ಭಾವ ಮೂಡುವಂತಾಗುತ್ತದೆ.

ಕಲ್ಯಾಣದ ನಗರದೇವತೆಯು ಹುಚ್ಚಿಯ ವೇಷದಲ್ಲಿ ಆಗಾಗ ಬಂದು ದಾಮೋದರ, ಬಸವಣ್ಣ, ಬಿಜ್ಜಳರೊಂದಿಗೆ ನಡೆಸುವ ಮಾತುಕಥೆಯು ಅಂದಿನ ಕಲ್ಯಾಣದ ಪರಿಸ್ಥಿತಿಯನ್ನು ಮನ ಮುಟ್ಟಿಸುತ್ತದೆ. ಒಮ್ಮೆ ಅವಳು ಸಂಗಯ್ಯನನ್ನು ಕುರಿತು ಹೇಳುವ "ನಿನಗೆಲ್ಲೋ ಹುಚ್ಚು!ಕಂಡೆಯಾ ಕಲ್ಯಾಣವಾ? ಇಂದು ಶಿವರಾತ್ರಿ; ಬೆಳಕಿಲ್ಲ ದೇವಾಲಯಗಳಲ್ಲಿ ಕತ್ತಲೆಯಲ್ಲಿ ಅಡಗಿಕೊಂಡಿದ್ದಾವೆ. ದೇವರುಗಳೆಲ್ಲ ರಾಜನಿಗೆ ಹೆದರಿ!ನಗರದೇವತೆಯಾದ ನನಗೇ ಗೊತ್ತಾಗುತ್ತಿಲ್ಲ;ಯಾವುದು ನಗರ? ಯಾವುದು ಸ್ಮಶಾನ? ಅಂತ!" ಎಂಬ ಮಾತುಗಳು ಬಿಜ್ಜಳನ ಕಲ್ಯಾಣದ ಚಿತ್ರಣವನ್ನು ಕಣ್ಣುಕಟ್ಟಿಸುತ್ತದೆ.

ಪ್ರಜಾ ಪಾಲಕನಾದ ಬಿಜ್ಜಳನು ಮಾರುವೇಷದಲ್ಲಿ ಶಿವರಾತ್ರಿಯ ರಾತ್ರಿಯಲ್ಲಿ 'ಅಂಗಾಂಗ' ಪೂಜೆಗೆಂದು, ಮತ್ತು ಶರಣ ಸಂಗಯ್ಯನು 'ಲಿಂಗ' ಪೂಜೆಗೆಂದು ಸೂಳೆ ಸಾವಂತ್ರಿಯ ಮನೆಯಲ್ಲಿದ್ದಾಗ, ಸಂಗಯ್ಯನನ್ನು ಹುಡುಕುತ್ತಾ ಅಲ್ಲಿಗೆ ಬಂದ ಬಸವಣ್ಣನು ಸೂಳೆಸಾವಂತ್ರಿಯನ್ನು 'ತಾಯಿ' ಎಂದು ಕರೆಯುವುದು ಬಿಜ್ಜಳನಿಗೆ ಅಸಹ್ಯ ಹಾಗೂ ಕುತೂಹಲವೆನಿಸುತ್ತದೆ. ಮುಂದುವರೆದು

ಈ ಜನಕ್ಕೆ ಅದೇನು ಮಾಟ ಮಾಡಿದ್ದೀ ಬಸವ?
ಕಲ್ಯಾಣದ ಒಬ್ಬರಲ್ಲೂ ಸ್ವಾಮಿ ಭಕ್ತಿ ಇಲ್ಲ
ಇದ್ದದ್ದೆಲ್ಲಾ ಬಸವ ಭಕ್ತೀನೇ!ಬಸವ ಭಕ್ತಿ,
ಸ್ವಾಮಿ ಭಕ್ತಿ, ಎರಡರಲ್ಲಿ ಯಾವುದು ಹೆಚ್ಚು ಅಂತ
ಒರೆಗೆ ಹಚ್ಚಲೇಬೇಕಲ್ಲ! ಎಂದುಹೇಳುತ್ತಾನೆ.

ಈ ಮಾತುಗಳು ಅವನ ವಿಕ್ಷಿಪ್ತ ವಿಷಪೂರಿತ ಮನಃಸ್ಥಿತಿಯನ್ನು ಬಿಂಬಿಸುತ್ತದೆ. ಇಂತಹ ಮನಸ್ಸಿನಿಂದಲೇ 'ಮಹಾಮನೆ'ಯನ್ನು ತನ್ನ 'ಅರಮನೆ'ಗೆ ಪೈಪೋಟಿ ಎಂದು ಭಾವಿಸಿದ. ಇಂದಿನ ರಾಜಕಾರಣಿಗಳಿಗೆ ಗಾಂಧಿತತ್ವವು ಹೇಗೆ ಸ್ವೀಕರಿಸಲಾರದ ಸ್ಥಿತಿ ತಲುಪಿರುವುದೋ ಹಾಗೆ ಬಿಜ್ಜಳನಿಗೆ ಬಸವತತ್ವದ ಹತ್ತಿರವೂ ಸುಳಿಯಲಾಗಿಲ್ಲ ಎಂಬ ವಿಚಾರ ಸ್ಪಷ್ಟವಾಗುತ್ತದೆ.

ಬಸವಣ್ಣನು ಸಮಾಜದ ನೊಂದವರ್ಗಕ್ಕೆ ಸಾಂತ್ವಾನ ಹೇಳಲು ಬಯಸಿದ್ದನು "ಜನರಿಗೆ ಆತ್ಮ ವಿಶ್ವಾಸ ಸಿಗುವುದು ಸರ್ವಾಧಿಕಾರಿಗೆ ಯಾವಾಗಲೂ ಅಪಾಯ" ನಗರ ದೇವತೆ ಹುಚ್ಚಿಯ ಒಂದು ಮಾತು ಮಾತ್ರ ನಾಟಕಕಾರರೇ ಆಗಿನ ಇದೇ ಇತಿಹಾಸದ ಮೇಲೆ ಬರೆದ ಒಂದು ಭರತವಾಕ್ಯದಂತಿದೆ. ಬಸವಣ್ಣನ ಹೊಸ ಕ್ರಾಂತಿಯನ್ನು ಕುರಿತು ಅವಳು ಹೀಗೆ ಹೇಳುತ್ತಾಳೆ.

ಬಸವಾ ಬಸವಣ್ಣಾ, ನಿನ್ನ ಕನಸು ಇರುತ್ತದೆ ನನ್ನಪ್ಪಾ-ನನಸಾಗುವವರೆಗೆ, ಕೊಂಚ ಅವಸರವಾಯ್ತು ಅತಿ ಉತ್ಸಾಹದಲ್ಲಿ ಮಧ್ಯ ರಾತ್ರಿಯಲ್ಲೇ ಎದ್ದು ಕೂತೆ ನೀನು! ಎದ್ದವನೇ ಮುಖಕ್ಕೆ ತಣ್ಣೀರೆರಚಿಕೊಂಡು ಬನ್ನಿರೋ ಬನ್ನಿರಿ ಹೊಸ ಬೆಳಕಿನ ಉದಯಕ್ಕೆ! ಅಂತ ಜನಗಳ ಕರೆದೆ. ನಿಜಹೇಳಬೇಕೆಂದರೆ ಆಗಿನ್ನೂ ಬೆಳಗಿನ ತಾರೆ ಮೂಡಿರಲೇ ಇಲ್ಲ!

ಹೌದು ಕಾಲಮಾಗದೇ ಬಂದ ಕ್ರಾಂತಿಯ ಫಲಗಳಿಂದ ಕಲ್ಯಾಣದಲ್ಲಿ ಸಾಮಾಜಿಕ – ಧಾರ್ಮಿಕ ಕ್ರಾಂತಿಯುಂಟಾಗುವ ಬದಲು ರಕ್ತ ಕ್ರಾಂತಿಯುಂಟಾಯಿತು. ಇದು ಚರಿತ್ರೆಯ ದುರಂತವೇ ಸರಿ.

ಬಸವಣ್ಣನ ಅಂತ್ಯದ ಬಗೆಗೆ ಹಲವು ವಾದ-ವಿವಾದಗಳಿರುವಂತೆಯೇ 'ಬಿಜ್ಜಳ'ನ ಸಾವಿನ ಬಗೆಗೂ ಹಲವು ಭಿನ್ನ ವಿಭಿನ್ನ ಅಭಿಪ್ರಾಯಗಳಿವೆ. ಅವುಗಳಲ್ಲಿ 'ಶಿವದ್ರೋಹವನ್ನೆಸಗಿದ ಬಿಜ್ಜಳನನ್ನು ಶರಣರು ಕೊಲೆಮಾಡಿದರೆಂಬುದು ಪ್ರಮುಖವಾದ ವಿಚಾರ. ಆದರೆ ಕಂಬಾರರು ಸಂಶೋಧಕರಾದ ಡಾ.ಎಂ.ಎಂ.ಕಲಬುರ್ಗಿಯವರು ನೀಡಿದ ಮಾಹಿತಿಯನ್ನು ಆಧರಿಸಿ (ಸ್ವತಃ ಕಂಬಾರರೇ 'ತಲೆದಂಡ' 'ನನ್ನ ಮಾತು' – ಹೇಳಿರುವಂತೆ) ಚಾಲುಕ್ಯರಿಗೆ ದ್ರೋಹಮಾಡಿ ಸಿಂಹಾಸನವೇರಿದ ಬಿಜ್ಜಳನನ್ನು ಚಾಲುಕ್ಯರ ಬೊಮ್ಮರಸ ಹಾಗೂ ಜಗದೇವರು ದ್ವಾರಪಾಲಕರ ವೇಷದಲ್ಲಿ ಸೂಳೆ ಸಾವಂತ್ರಿಯ ಮನೆಯಲ್ಲಿ ಕೊಲೆ ಮಾಡಿ ಪ್ರತೀಕಾರ ತೀರಿಸಿಕೊಂಡರೆಂದು ಹೇಳಿದ್ದಾರೆ. ಈ ಮೂಲಕ ಬಿಜ್ಜಳನ ಕೊಲೆಗೆ ಕಾರಣವನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. ತನ್ನ ಕೊನೆಯ ಕ್ಷಣಗಳಲ್ಲಿ ಬಿಜ್ಜಳನ ಸ್ವಗತದ ಮಾತುಗಳು ಶೇಕ್ಸ್‌ಪಿಯರನ ಸಮಕಾಲಿನನಾಗಿದ್ದ ಮಾರ್ಲೋನ ನಾಟಕ 'ಡಾ.ಫಾಸ್ಟಸ್'ದಲ್ಲಿಯ ಫಾಸ್ಟಸನ್ ಸ್ವಗತವನ್ನು ನೆನಪಿಸುತ್ತದೆ.

"ಹೇಳಿ ಕೇಳಿ ಭವಿ ನಾನು ಬಸವಾ ಕ್ಷಮಿಸು ನನ್ನ" ಎನ್ನುವ ಬಿಜ್ಜಳನ ಕೊನೆಯ ಮಾತುಗಳಲ್ಲಿ ತಾನು ಮೀರಲಾಗದ್ದರ ಬಗೆಗೆ ಅವನಿಗರಿವಿದೆ. ಬಸವಣ್ಣನ ಬಗೆಗೆ ತನ್ನೊಳಗೊಳಗೆಯೇ ಭಕ್ತಿಯೂ ಇದೆ ಎಂದು ಬಿಂಬಿಸುತ್ತದೆ.

# ಅಧ್ಯಾಯ-೯

## ಉಪಸಂಹಾರ

ಬಸವಣ್ಣನು "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ ಕೂಡಲಸಂಗಮ ದೇವಾ" ಎಂದು ಜಂಗಮ ಜಗತ್ತಿಗೆ ಸಾರಿ ಅದರಂತೆಯೇ ಬದುಕಿ ಶೋಷಣೆರಹಿತ, ಜಾತ್ಯಾತೀತ, ಲಿಂಗಭೇದವಿಲ್ಲದ ಮೌಢ್ಯರಹಿತವಾದ, ಸಮಾನತೆಯ ಹಂದರದ ಮೇಲೆ ನಿರ್ಮಿತವಾದ ನವ ಸಮಾಜವನ್ನು ನಿರ್ಮಿಸಲು ತನ್ನ ಜೀವ-ಜೀವನವನ್ನು ಮುಡಿಪಾಗಿಟ್ಟ ಜಗಜ್ಯೋತಿ.

ಇಂತಹ ಮಹಾನ್ ಮಾನವತಾವಾದಿ ಬಸವಣ್ಣನ ಚರಿತ್ರೆ ಹಾಗೂ ಚಾರಿತ್ರ್ಯಕ್ಕೆ ಕಾರ್ಯಕಾರಣ ಸಂಬಂಧ ಜೋಡಿಸಿ ಆತನ ಘನವ್ಯಕ್ತಿತ್ವಕ್ಕೆ 'ತಲೆದಂಡ' ನಾಟಕದ ಮೂಲಕ ರೂಪಕೊಟ್ಟ ಬೇಂದ್ರೆಯವರು ಕರ್ತಾರನ ಕಮ್ಮಟವಾದ ಮರ್ತ್ಸ್ಯಲೋಕದಲ್ಲಿ "ರಸವೇ ಜನನ, ವಿರಸ ಮರಣ, ಸಮರಸವೇ ಜೀವನ" ಎಂದು ಬದುಕಿದವರು.

ಬಸವಣ್ಣನು ವಚನ ಸಾಹಿತ್ಯದ ಮೂಲಕ ಕನ್ನಡ ನುಡಿಗೆ ಹೊಸ ಬೆಡಗು, ನಾವೀನ್ಯ, ಶೈಲಿ, ಸೊಬಗು-ಸೊಗಸುಗಳನ್ನು ಕೊಟ್ಟನು. ನೊಂದವರ ಬಾಯಿಗೆ ಮಾತುಕೊಟ್ಟನು. 'ಭುವನದ ಭಾಗ್ಯ ಬಸವಣ್ಣ'ನಂತೆಯೇ ಕನ್ನಡ ನಾಡಿನ ವರಕವಿ ಬೇಂದ್ರೆಯವರು ವೇದ-ಉಪನಿಷತ್ತುಗಳ ಹಿನ್ನೆಲೆ, ಶ್ರೀ ಅರವಿಂದರ ಪೂರ್ಣಯೋಗದ ಗಾಢವಾದ ಪ್ರಭಾವ ಮತ್ತು ಪಾಶ್ಚಿಮಾತ್ಯ ವಿದ್ವಾಂಸರ ಪ್ರೇರಣೆಗಳಿಂದ ನವೋದಯ ಸಾಹಿತ್ಯ ಪರಂಪರೆಗೆ ಹೊಸರೂಪಕೊಟ್ಟರು.

ಈ ಹಿಂದೆಯೇ ಚರ್ಚಿಸಿರುವಂತೆ ಬಸವ-ಬಿಜ್ಜಳರಯುಗದ ವರ್ಗ, ವರ್ಣ ಸಂಘರ್ಷವನ್ನು ಕುರಿತು ನೂರಾರು ನಾಟಕಗಳು ರಚನೆಯಾಗಿದ್ದು ಇವೆಲ್ಲವುಗಳ ನಡುವೆ ಬೇಂದ್ರೆ ವಿರಚಿತ 'ತಲೆದಂಡ' ನಾಟಕವು ವರ್ಣ, ವರ್ಗ ಸಂಘರ್ಷಕ್ಕಿಂತ ಮುಖ್ಯವಾಗಿ ಬಸವಣ್ಣನವರ ಅವತಾರಿ ವ್ಯಕ್ತಿತ್ವದ ಆತ್ಮಗುಣದ ಸಂಘರ್ಷವನ್ನು ಬಿಚ್ಚಿತೋರಿಸುವ ಪ್ರಯತ್ನದಲ್ಲಿ ಸಫಲವಾಗಿದೆ.

ಹರಿಹರನ ಬಸವರಾಜದೇವರ ರಗಳೆಯನ್ನು ಆಕರವಾಗಿರಿಸಿಕೊಂಡು ಬೇಂದ್ರೆಯವರು 'ತಲೆದಂಡ' ನಾಟಕವನ್ನು ರಚಿಸಿದ್ದಾರೆ. ಶಿವಶರಣರ ಕಾಲಕ್ಕೆ ಹತ್ತಿರದವನಾಗಿ ಬದುಕಿದ ಹರಿಹರನು ಶರಣ ಚರಿತ್ರೆಗಳನ್ನು ನೇರಾನೇರವಾಗಿ ಕೇಳಿತಿಳಿದವನು. ಈ ಹಿನ್ನೆಲೆಯಲ್ಲಿ ಆತ ಶರಣರ ಚರಿತ್ರೆಗಳನ್ನು ರಚಿಸುವಾಗ ವಾಸ್ತವಿಕ ಅಂಶಗಳನ್ನು ಗಮನಿಸಿದ್ದಾನೆ. ಆದರೆ ಅದೇ ವೇಳೆಗೆ ಕೆಲವು ಶರಣರ ಹುಟ್ಟನ್ನು ವಿವರಿಸುವಾಗ ಕೈಲಾಸದಿಂದಲೇ ಗಣೇಶ್ವರ ಶರಣನಾಗಿ ಉದಯಿಸುವಂತೆ ಚಿತ್ರಿಸಿದ್ದಾನೆ.

ಶಿವನೇ ತನ್ನ ಸರ್ವಸ್ವವೆಂದು ಶಿವಶರಣರ ಸಂಕುಳವೇ ತನ್ನ ಬಳಗವೆಂದು, ಪುರಾತನರೆ ತನ್ನ ಪರಮಾರಾಧ್ಯರೆಂದು ನಂಬಿ, ನಚ್ಚಿ ಬದುಕಸಾಗಿಸಿದ ಭಕ್ತಿಕವಿ ಹರಿಹರನಿಗೆ ಶರಣಜ್ಯೋತಿ ಬಸವಣ್ಣನು ಕಾರಣೀಪುರುಷನಾಗಿಯೇ ಕಂಡುದುದರಲ್ಲಿ ಅಚ್ಚರಿಯಿಲ್ಲ.

ಈ ನಿಟ್ಟಿನಲ್ಲಿ ಬೇಂದ್ರೆಯವರ ತಲೆದಂಡ ನಾಟಕದಲ್ಲಿ ಹರಿಹರನ ಅನುಸರಣೆ ಇದೆಯೇ ಹೊರತು, ಅನುಕರಣೆ ಇಲ್ಲ.

ಹರಿಹರನ ರಗಳೆಯಂತೆಯೇ 'ತಲೆದಂಡ' ನಾಟಕದ ಬಸವಣ್ಣನುಸಹ ಅವತಾರೀ ಪುರುಷ, ಆದರೆ ಇಲ್ಲಿ ರಗಳೆಯಲ್ಲಿ ಚಿತ್ರಿಸಿರುವಂತೆ ಕೈಲಾಸದಲ್ಲಿ ಕುಮಾರಸ್ವಾಮಿಗೆ ಸಂಪಿಗೆ ಹೂವನ್ನು ಕೊಡದೆಯೂ ಕೊಟ್ಟೆನೆಂದು ವಾದಿಸಿದ ತಪ್ಪಿಗಾಗಿ ಬಸವಣ್ಣನ ಜನನವಾಗದೆ, ಭೀಮಕವಿಯ 'ಬಸವಪುರಾಣ'ದಲ್ಲಿ ಚಿತ್ರಿಸಿರುವಂತೆ ಕೈಲಾಸದಲ್ಲಿ ನಾರದನ ಕೋರಿಕೆಯಂತೆ, ಶಿವನ ಆಜ್ಞೆಯನ್ನು ಅನುಸರಿಸಿ ಬಸವಣ್ಣನು ಭೂ ಲೋಕದಲ್ಲಿ ಅವತರಿಸುತ್ತಾನೆ.

ಬಸವಣ್ಣನು ಬಾಲ್ಯದಲ್ಲಿಯೇ ತಂದೆತಾಯಿಗಳನ್ನು ಕಳೆದು ಕೊಂಡದ್ದು, ಅಜ್ಜಿಯ ಪೋಷಣೆಯಲ್ಲಿ ಬೆಳದದ್ದು, ಆನಂತರ ಬಲದೇವನ ಆಸರೆ ಪಡೆದು ಆತನ ಮಗಳನ್ನು ವಿವಾಹವಾದದ್ದು, ಶ್ರೀಕರಣದ ಚಾವಡಿಯಲ್ಲಿ ಉಂಟಾಗಿದ್ದ ಭಂಡಾರದ ಲೆಕ್ಕದ ಸಮಸ್ಯೆಯನ್ನು ಬಿಡಿಸಿ ಬಿಜ್ಜಳನ ಆಸ್ಥಾನದ ಕರಣಿಕ, ಭಂಡಾರಿ, ಪ್ರಧಾನಿಯಾದದ್ದು ಮುಂತಾದ ಜನಜನಿತ ಘಟನೆಯನ್ನು ಚಿತ್ರಿಸುತ್ತಲೇಬೆಳೆಯುವ ಕಥೆಯು ಮುಂದೆ ಬಸವಣ್ಣನ ಪವಾಡಗಳು, ಆಧ್ಯಾತ್ಮಿಕ ಸಿದ್ಧಿಯ ಮೂಲಕ ಬಸವಣ್ಣನ ಅವತಾರಿ ವ್ಯಕ್ತಿತ್ವದ ಆತ್ಮಗುಣದ ಸಂಘರ್ಷದ ಚಿತ್ರಣವು ಬಿಚ್ಚಿಕೊಳ್ಳುತ್ತದೆ.

ಹರಿಹರನ ರಗಳೆಯಲ್ಲಿ ಬಸವಣ್ಣನು ತೋರಿದ ಒಟ್ಟು ೮ ಪವಾಡಗಳ ಪೈಕಿ ಬೇಂದ್ರೆಯವರು ತಮ್ಮ ನಾಟಕದಲ್ಲಿ – ಬಿಜ್ಜಳನ ಅರಮನೆಯಲ್ಲಿ ಗಣಕರು ಮಾಡಿದ ತಪ್ಪನ್ನು ಕಣ್ಣನೋಟದಿಂದಲೇ ಸರಿಪಡಿಸಿದ, ಧರ್ಮನಿಷಿದ್ಧವಾದ ಕೇದಗೆ ಹೂವನ್ನು ಲಿಂಗಕ್ಕೆ ಏರಿಸಿದ ಮತ್ತು ಭಂಡಾರದ ಹಣದ ದುರುಪಯೋಗದ ಆಪಾದನೆ ಬಂದಾಗ ಅದು ನೂರ್ಮಡಿ ವರ್ಧಿಸಿದ – ಹೀಗೆ ಮೂರು ಪ್ರಸಂಗಗಳನ್ನು ಮಾತ್ರ ಉಲ್ಲೇಕಿಸಿದ್ದಾರೆ. ಬಹುಶಃ ಬೇಂದ್ರೆಯವರು ಈ ಪ್ರಸಂಗಕ್ಕೆ ಕಾರಣಗಳನ್ನು ಅನುಕ್ರಮವಾಗಿ–ಬಸವಣ್ಣನ ಅಗಾಧವಾದ 'ಲೆಕ್ಕಪಾಂಡಿತ್ಯ', 'ದೇವಂ ಭಕ್ತರ ಕೊಟ್ಟಡೆ ಕೈಕೊಳ್ವ' ಎಂಬ ಮಾತಿನಂತೆ 'ಭಕ್ತನಿಗೆ ಭಾವ ಮುಖ್ಯವೇ ಹೊರತು ಬುದ್ದಿಯಲ್ಲ' ಎಂದೂ ಮತ್ತು 'ಸತ್ಯಮೇವ ಜಯತೆ' ಎಂಬ ಕಾರಣಗಳನ್ನು ಕಂಡು ಕೊಂಡಿರಬೇಕೆನಿಸುತ್ತದೆ. ಬಸವಣ್ಣನ ಪವಾಡಗಳ ವರ್ಣನೆಯ ಎದುರು ಆತನ ಮಾನವೀಯ ಹೋರಾಟಗಳಿಗೆ ಚ್ಯುತಿಯುಂಟಾಗದಿರಲೆಂದು ಉದ್ದೇಶಪೂರ್ವಕವಾಗಿಯೇ ಬೇಂದ್ರೆಯವರು ಉಳಿದ ೫ ಪವಾಡಗಳ ಪ್ರಸ್ತಾಪವನ್ನು ಮಾಡಿಲ್ಲವೆನಿಸುತ್ತದೆ.

ಶಿವಪೂಜೆನಿರತ ಬಸವಣ್ಣನು ಸ್ವತಃ ತನಗೆ ತಾನೇ ಪೂಜೆಮಾಡಿಕೊಳ್ಳುವ, ಈರುಳ್ಳಿಯ ಪ್ರಸಂಗದಲ್ಲಿ ಅರಿಯದೇ ತನ್ನಿಂದಾದ ತಪ್ಪಿಗೆ ಪ್ರಾಯಶ್ಚಿತವಾಗಿ ಕಿನ್ನರಿ ಬೊಮ್ಮಯ್ಯನನ್ನು ತೃಪ್ತಿಪಡಿಸಲು ಬಸವಣ್ಣನು ತನ್ನನ್ನು ಈರುಳ್ಳಿಯಿಂದ ಸಿಂಗರಿಸಿಕೊಳ್ಳುವ, ಈರುಳ್ಳಿಯಿಂದ ಅಲಂಕೃತವಾದ ರಥದಲ್ಲಿ ಕರೆತರುವ ಘಟನೆಗಳು ನಡೆದು ಇದರಿಂದ ಬಿಜ್ಜಳನ ರಾಣಿ ಲಚ್ಚಲೆಯು ಬಸವಣ್ಣನ ಬಗೆಗೆ ಗೌರವ ತಾಳುತ್ತಾಳೆ. ಬಿಜ್ಜಳನೂ ಇದಕ್ಕೆ ತಲೆದೂಗುತ್ತಾನೆ. ಇಪ್ಪತ್ತೊಂದನೆಯ ಶತಮಾನದ ಆದಿಯಲ್ಲಿ ಕುಳಿತು ಈ ದೃಶ್ಯವನ್ನು ಆಸ್ವಾದಿಸುವ ಸಹೃದಯನಿಗೆ ಈರುಳ್ಳಿಯ ಪ್ರಸಂಗವನ್ನು ಅರಗಿಸಿಕೊಳ್ಳಲು ಆಗದಂತೆನಿಸಿದರೂ ಸಹ ಹರಿಹರನ ಕಾಲದಲ್ಲಿ ನಿಂತು ಯೋಚಿಸಿದಾಗ ಬಸವಣ್ಣನ ಬಗೆಗೆ ಧನ್ಯತಾಭಾವ ಮೂಡುತ್ತದೆ.

ನಾಟಕದ ಅಂತ್ಯದಲ್ಲಿ ಬೇಂದ್ರೆಯವರು, ಇತಿಹಾಸ ಮತ್ತೆಮತ್ತೆ ಕೇಳುವ ಎರಡು ಪ್ರಶ್ನೆಗಳೆಡೆಗೆ ಬೆಳಕು ಚೆಲ್ಲುತ್ತಾರೆ. ಬಸವ–ಬಿಜ್ಜಳರ ಯುಗವನ್ನು ಕುರಿತು ರಚನೆಯಾಗಿರುವ ಈವರೆಗಿನ ಕಾವ್ಯ, ಕಾದಂಬರಿ, ನಾಟಕ, ಚರಿತ್ರೆಯಲ್ಲಿ ಬಿಜ್ಜಳನ ಅಂತ್ಯ ಸಾವೋ? ಅಥವಾ ಕೊಲೆಯೋ? ಬಸವಣ್ಣನ ಅಂತ್ಯ ಕೊಲೆಯೇ? ಅಥವಾ ಲಿಂಗೈಕ್ಯವೇ? ಎಂಬುದು ಆ ಎರಡು ಪ್ರಶ್ನೆಗಳು.

ಇಲ್ಲಿಯವರೆಗೆ ಐತಿಹಾಸಿಕ ಮತ್ತು ಜನಪ್ರಿಯ ಕೃತಿಗಳೆಲ್ಲವೂ ಬಿಜ್ಜಳ ಮತ್ತು ಬಸವೇಶ್ವರ–ಇವರಿಬ್ಬರಲ್ಲಿದ್ದ ಧಾರ್ಮಿಕ ಮತಭೇದಗಳೇ ಅವರಿಬ್ಬರಲ್ಲಿ ಒಬ್ಬರ ಸಾವಿಗೆ ಕಾರಣವೆಂದು ಸಾರುತ್ತಾ ಬಂದಿವೆ.

ಕಾರ್ನಾಡರ 'ತಲೆದಂಡ' ನಾಟಕದಲ್ಲಿ ಬಸವಣ್ಣನ ಅಂತ್ಯದ ಬಗೆಗೆ ನೇರವಾಗಿ ಪ್ರಸ್ತಾಪ ಬರುವುದಿಲ್ಲವಾದರೂ ಸಹ ಜಗದೇವ ಮತ್ತು ಮಲ್ಲಿಬೊಮ್ಮರೆಂಬ ಶರಣರು ಬಿಜ್ಜಳನನ್ನು ಕಲ್ಯಾಣದ ಶಿವದೇವಾಲಯದಲ್ಲಿ ಕೊಲ್ಲುತ್ತಾರೆ. ಕಂಬಾರರ 'ಶಿವರಾತ್ರಿ' ನಾಟಕದಲ್ಲಿ ಜಗದೇವ ಮತ್ತು ಮಲ್ಲಿಬೊಮ್ಮರು ರಾಜಕೀಯ ದ್ವೇಷದಿಂದ ಬಿಜ್ಜಳನನ್ನು ಸೂಳೆ ಸಾವಂತ್ರಿಯ ಮನೆಯಲ್ಲಿ ಕೊಲೆ ಮಾಡುತ್ತಾರೆ. ಬಿಜ್ಜಳನ ಸಾವಿನ ಬಗೆಗಿನ ದ್ವಂದ್ವಗಳು ಇಲ್ಲಿಗೆ ನಿಲ್ಲುವುದಿಲ್ಲ. ಬಿ.ಪುಟ್ಟಸ್ವಾಮಯ್ಯನವರು ತಮ್ಮ 'ಕಲ್ಯಾಣದಕ್ರಾಂತಿ' ಕಾದಂಬರಿಯಲ್ಲಿ ಪ್ರತಿಪಾದಿಸಿದಂತೆ ಬಿಜ್ಜಳನು ಬಸವಣ್ಣನನ್ನು ಗಡಿಪಾರುಮಾಡಿದ್ದರಿಂದ ಶರಣರು ಬಿಜ್ಜಳನನ್ನು ಕೊಲೆಮಾಡಿದರೆಂದು ಚಿತ್ರಿಸಿದ್ದಾರೆ.

'ಬಸವಪುರಾಣ'ದಲ್ಲಿ ಹೇಳಿರುವಂತೆ – ತದ್ರೋಹಿಯನಪಹರಿಸಿ ನನ್ನಿಯಂ ಮೆರೆ' ಎಂದು ಬಸವಣ್ಣನು ಜಗದೇವನಿಗೆ ಆದೇಶವಿತ್ತಂತೆ, ಜಗದೇವ, ಮೊಲ್ಲ ಮತ್ತು ಬೊಮ್ಮ ಈ ಮೂವರೂ ಸೇರಿ ಓಲಗದಲ್ಲಿದ್ದ ಬಿಜ್ಜಳನನ್ನು ಕೊಲ್ಲುತ್ತಾರೆ. ಆದರೆ ಡಾ.ಎಚ್.ತಿಪ್ಪೇರುದ್ರಸ್ವಾಮಿಯವರು ತಮ್ಮ 'ಕರ್ತಾರನ ಕಮ್ಮಟ' ಕಾದಂಬರಿಯಲ್ಲಿ ಈ ಘಟನೆಗೆ ಚಾರಿತ್ರಿಕ ಹಿನ್ನೆಲೆಯನ್ನು ಕೊಡುತ್ತಾ – ಬಿಜ್ಜಳನ ರಾಜಕೀಯ ಶತ್ರುಗಳಾದ ಮತ್ತು

ಚಾಳುಕ್ಯ ವಂಶದ ಕೊನೆಯ ಸಾಮ್ರಾಟನ ಸಂಬಂಧಿಗಳಾದ ಜಗದೇವ, ಮಲ್ಲ, ಬೊಮ್ಮರ ಕಾರಸ್ಥಾನದಿಂದ ಕೊಲೆನಡೆದು ಅದರ ಅಪವಾದ ಶರಣರ ಮೇಲೆ ಬರುವಂತೆ ತಂತ್ರವನ್ನು ಹೂಡಲಾಗುತ್ತದೆ ಎಂದು ಪ್ರತಿಪಾದಿಸಿದ್ದಾರೆ.

ಹರಿಹರನ ಬಸವರಾಜದೇವರ ರಗಳೆಯತ್ತ ಕಣ್ಣುಹಾಯಿಸಿದಾಗ–"ಇಂತು, ಬಸವಣ್ಣನು ಮರ್ತ್ಯಲೋಕದೊಳಗೆ ತನ್ನ ಮಹಿಮೆಯ ಜ್ಯೋತಿಯನ್ನು ಬೆಳಗಿ ಸತತವಾಗಿ ಕೆಲಕಾಲ ಶಿವಸುಖದಲ್ಲಿ ಓಲಾಡಿಕೊಂಡಿದ್ದನು. ಶಿವದ್ರೋಹವಂ ಗೈದ ಬಿಜ್ಜಳನ ಕೊಲಿಸುತಂ,ಭವಹರನ ಶರಣ ಸದ್ಗೋಷ್ಠಿಯಂ ಸಲಿಸುತಂ" ಎಂದು ಬರೆದು ಧಡಬಡನೆ

ಕತೆಗೆ ಮುಕ್ತಾಯ ಹಾಡುವ ಆತುರವನ್ನು ಕವಿ ತೋರಿದ್ದಾನೆ. ಆದರೆ ಬಿಜ್ಜಳನು ಎಸಗಿದ ದ್ರೋಹವಾವುದು? ಅದೆಂತು ಜರುಗಿತು? ಇತ್ಯಾದಿ ಏನನ್ನೂ ಸಹ ತಿಳಿಸದೆ ಒಂದೆರಡು ಪದಗಳಲ್ಲಷ್ಟೇ ಮುಗಿಸಿರುವುದನ್ನು ನೋಡಿದರೆ ಕವಿಯ ಬಾಳಿನಲ್ಲೇ ಏನೋ ಅಚಾತುರ್ಯ ಜರುಗಿರಬೇಕು ಇಲ್ಲವೇ ರಗಳೆಯ ಕೊನೆಯ ಸ್ಥಲವನ್ನು ಬೇರೆ ಯಾರೋ ಬೇಕೆಂದು ಬರೆದು, ಹರಿಹರನೇ ಬರೆದಿದ್ದ ಭಾಗಗಳನ್ನು ಅಳಿಸಿಹಾಕಿ ಅದರ ಸ್ಥಾನ ತುಂಬಿರಬಹುದೆಂಬ ಪ್ರಬಲ ಸಂದೇಹ ನಮ್ಮನ್ನು ಕಾಡದೇ ಇರದು.

ಬಸವಣ್ಣನು ಅದೇಕೆ ಮಂಗಳವಾಡದಿಂದ ಹೊರಟುಬಿಟ್ಟನೆಂಬ ಕಿಂಚಿತ್ ಸುಳಿವೂ ಸಹ ಹರಿಹರನ ರಗಳೆಯಲ್ಲಿ ಸಹೃದಯ ಓದುಗನಿಗೆ ತಿಳಿಯದಾಗುತ್ತದೆ. ಬೇಂದ್ರೆಯವರು ಹರಿಹರನ ರಗಳೆಯನ್ನೇ ಆಕರವಾಗಿಟ್ಟುಕೊಂಡು ನಾಟಕ ರಚಿಸಿದ್ದರಾದರೂ ಸಹ ಬಿಜ್ಜಳ – ಬಸವರ ಅಂತ್ಯ ಯಾವುದೇವರ್ಗದ ಧಾರ್ಮಿಕನಂಬಿಕೆಗಳಿಗೆ, ಬಸವಣ್ಣನು ಸಾರಿದ 'ದಯವೇ ಧರ್ಮದ ಮೂಲ'ವೆಂಬ ಸಂದೇಶಕ್ಕೆ ಚ್ಯುತಿಬಾರದಂತೆ, ಪದಗಳ ಚಮತ್ಕಾರದ ನಡುವೆ ಬಿಜ್ಜಳನ ಸಾವಿನ ಬಗೆಗೆ ಚರಿತ್ರೆಯು ಅವಿತು ಹೋಗದಂತೆ ಎಚ್ಚರವಹಿಸಿದ್ದಾರೆ. ಬೇಂದ್ರೆಯವರು ಬಸವ–ಬಿಜ್ಜಳರ ಅಂತ್ಯವನ್ನು ಕುರಿತು ಬರೆಯುತ್ತಾ–

ಹರಳಯ್ಯ–ಮಧುವರಸರ ಕಣ್ಣುಕೀಳುವ, ಆನೆಯ ಕಾಲಿಗೆ ಹಾಕಿ ತುಳಿಸುವಕಾರ್ಯ ನಡೆಯಲಿದೆ ಎಂಬ ಕೂಗಾಟದನಡುವೆ, ಕಲ್ಯಾಣ ಹತ್ತಿಉರಿಯುತಿತ್ತು. ಆಗ ಜಗದೇವ ಬೊಮ್ಮಯ್ಯ, ಮಲ್ಲಿಬೊಮ್ಮಯ್ಯ ಎಂಬ ಶಸ್ತ್ರಧಾರಿಗಳು ಬಿಜ್ಜಳನನ್ನು ಕತ್ತಿಯಿಂದ ಇರಿದು ಕೊಲೆ ಮಾಡುತ್ತಾರೆ ಎಂದು ಬರೆದಿದ್ದಾರೆ. ಇಲ್ಲಿ ಬಿಜ್ಜಳನ ಸಾವಿಗೂ ಬಸವಣ್ಣನವರ ಲಿಂಗೈಕ್ಯಕ್ಕೂ ಯಾವ ಸಂಬಂಧವಿಲ್ಲ. ಏಕೆಂದರೆ ಬಿಜ್ಜಳನೇ ತನ್ನ ಮಗನಾದ ರಾಯಮುರಾರಿಯನ್ನು ಕರೆದು "ಕಲ್ಯಾಣವನ್ನು ಬಿಟ್ಟುಹೋದ ಬಸವಣ್ಣನನ್ನು ಮತ್ತೆ ಕಲ್ಯಾಣಕ್ಕೆ ಕರೆತಾ" ಎಂದು ರಾಜಾಜ್ಞೆಮಾಡಿ ಪ್ರಾಣಬಿಡುತ್ತಾನೆ. ಈ ಆಜ್ಞೆಯನ್ನು ಗಮನಿಸಿದಾಗ–ಸ್ವತಃ ಬಿಜ್ಜಳನೇ, ಬಸವಣ್ಣನು ಕಲ್ಯಾಣಕ್ಕೆ ಅನಿವಾರ್ಯ ಎಂದು ಸಾರಿದಂತಾಯಿತು ಹಾಗೂ ಅವನ ಕೊಲೆಯಲ್ಲಿ ಬಸವಣ್ಣನಪಾತ್ರ ಶೂನ್ಯ ಎಂದು ಪ್ರತಿಪಾದಿಸುವ ಪ್ರಯತ್ನವನ್ನು ಬೇಂದ್ರೆಯವರು ಮಾಡಿದ್ದಾರೆ. ಬಿಜ್ಜಳ ಮತ್ತು ಬಸವಣ್ಣರ ನಡುವೆ ತಾತ್ವಿಕ ಭೇದವಿದ್ದರೂ ಸಹ ಅವರೀರ್ವರು ಪರಸ್ಪರ ಕೊಲ್ಲುವ–ಕೊಲ್ಲಿಸುವಂತವರಲ್ಲ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

ಇನ್ನು ಬಸವಣ್ಣನ ಹುಟ್ಟಿನ ಬಗೆಗೆ ಇರುವ ವಾದ ವಿವಾದಗಳಂತೆಯೇ ಆತನ ಅಂತ್ಯದ ಬಗೆಗೂ ಸಹ ವಿಭಿನ್ನವಾದ ಅಭಿಪ್ರಾಯಗಳಿವೆ. ಆದರೆ ಬೇಂದ್ರೆ ವಿರಚಿತ ತಲೆದಂಡ ನಾಟಕದ ಕೊನೆಯಲ್ಲಿ "ನೀ ಕೊಟ್ಟ ತಲೆ ನಿನಗಲ್ಲದೆ ಅನ್ಯರಿಗಲ್ಲ" ಎಂದು ಸಾರಿ ಬಸವಣ್ಣನು ಕೂಡಲ ಸಂಗಮದಲ್ಲಿ ಐಕ್ಯನಾಗುತ್ತಾನೆ.

ಕಲ್ಯಾಣದ ಕ್ರಾಂತಿಯ ನಂತರವೇ ಬಸವಣ್ಣನ ಅಂತ್ಯವಾಯಿತೆಂಬುದನ್ನು ಒಪ್ಪುತ್ತಲೇ ಬಸವಣ್ಣನ ಮಹಿಮೆಯನ್ನು ಪ್ರಜ್ವಲಿಸುವಂತೆ ಮಾಡಲು, ಶಿವನಿಗೆ ತಲೆದಂಡ ನೀಡಿ ಬಸವಣ್ಣನು ಮುಕ್ತಿ ಹೊಂದುವಂತೆ ಬೇಂದ್ರೆ ಚಿತ್ರಿಸಿದ್ದಾರೆ. ಹಾಗೂ ಬಸವಣ್ಣನ ಆತ್ಮವು ಸಂಗಮದಲ್ಲಿ ಐಕ್ಯವಾಗುವಾಗ "ಓಂ ನಮಃ ಶಿವಾಯ! ಓಂ ಬಸವಾಯ ನಮಃ" ಎಂಬ ಮಂತ್ರಾಕ್ಷರದ ಹಿನ್ನೆಲೆಯನ್ನೊದಗಿಸಿ ಬಸವಣ್ಣನ ಕಾರಣೀಪುರುಷರನ್ನಾಗಿ ಚಿತ್ರಿಸಿದ್ದಾರೆ.

ದ.ರಾ.ಬೇಂದ್ರೆಯವರು ತಮ್ಮ 'ಸಾಹಿತ್ಯದ ವಿರಾಟ್ ಸ್ವರೂಪ' ಗ್ರಂಥದಲ್ಲಿ ಹೇಳಿರುವಂತೆ "ಶರಣರ ಲೋಕೋತ್ತರ ಜೀವನ ಒಂದು ವಿರೋಧಾಭಾಸ. ತೊಡಕಿನಂತೆ ಕಂಡರೂ ಅದೇ ಪ್ರಶ್ನೆ ಅದೇ ಉತ್ತರ. ಆ ಸ್ಪರ್ಶದ ಉತ್ಸಾಹದಲ್ಲಿ ಸ್ಪರ್ಧೆಯ ಕ್ಷೇತ್ರ ನಿರ್ಮಿಸುವ ಸಮಾಜದ ಚೇಷ್ಟೆ ಹೇತ್ವಾಭಾಸ. ಅದು ಸಿದ್ಧಿಯಂತೆ ಕಂಡರೂ ಆ ಸಿದ್ಧಿಯನ್ನು ಮುಚ್ಚುವ ಅವಸರ ಅದು" ಎಂಬ ಮಾತು ಬಸವಣ್ಣನ ಜೀವನ ಸಾಧನೆ, ಕಲ್ಯಾಣದ ಕ್ರಾಂತಿಪೂರ್ವ ಹಾಗೂ ಕ್ರಾಂತಿಯೋತ್ತರ ಸ್ಥಿತಿ ಮತ್ತು ತಲೆದಂಡ ನಾಟಕದ ಕಥಾ ಬೀಜವನ್ನು ಪ್ರತಿಬಿಂಬಿಸುತ್ತದೆ.

ತಲೆದಂಡ ನಾಟಕವು ಭಾರತೀಯ ದೃಷ್ಟಿಕೋನದ ಅವತಾರಿ ಚಾರಿತ್ರ್ಯ ಸಫಲತೆಯ ಶ್ರೇಷ್ಠಕೃತಿಯಾಗಿ ಮೂಡಿಬಂದಿದೆ. ಭರತನ ನಾಟ್ಯಶಾಸ್ತ್ರದ ತತ್ವಗಳನ್ನಾಧರಿಸಿ ರಚಿಸಿದ ಈ ನಾಟಕವು ಬಸವಣ್ಣನನ್ನು ಒಬ್ಬ ಪವಾಡಪುರುಷ ಹಾಗೂ ಕಾರಣೀಪುರುಷನನ್ನಾಗಿ ಬಿಂಬಿಸುವ ಪ್ರಯತ್ನದಲ್ಲಿ ಸಫಲವಾಗಿದೆ. ಆದ್ದರಿಂದಲೇ ಮಹಾನ್ ಮಾನವತಾವಾದಿ ಬಸವಣ್ಣನ ಶುದ್ಧ ಚಾರಿತ್ರ್ಯಕ್ಕೆ ಹಾಗೂ ಮಾನವೀಯ ಹೋರಾಟಕ್ಕೆ ದ.ರಾ.ಬೇಂದ್ರೆಯವರು ಸಲ್ಲಿಸಿದ ಭಕ್ತಿಪೂರ್ವಕ 'ಭಾವಪೂಜೆ' ಎನಿಸಿದೆ.

# ಅನುಬಂಧ–೧

## ಜನಪದ ಸಾಹಿತ್ಯದಲ್ಲಿ 'ಬಸವಣ್ಣ'

ಹಡೆದವ್ವ ಮಾದವ್ವ ಹಡೆದಪ್ಪ ಮಾದರಸ
ಪಡೆದವ್ವ ಅಕ್ಕ ನಾಗವ್ವ । ಬಸವನ
ಬಿಡದೆ ಸಲುಹಿದನು ವರಸಂಗ ॥

ಹುಟ್ಟಿ ಬಂದನು ಬಸವ ಕಟ್ಟುದಕೆ ಕಲ್ಯಾಣ
ಬಿಟ್ಟು ಬಾಗೋಡಿ । ನಾಗವ್ವ ನೊಡಗೂಡಿ
ಮೆಟ್ಟು ಮಾಡಿದನು ಸಂಗಮಗೆ ॥

ಓದಿದನು ಬಸವಯ್ಯ ವೇದದೊಳಗಿನ ಹುಸಿಯ
ಭೇದ ಭೇದವನೆ ಬಿಚ್ಚಿಟ್ಟ । ಜನಪದಕೆ
ತೇದುಂಡ ಜೀವಿ ಬಸವಣ್ಣ ॥

ಮೆಚ್ಚಿದನು ಬಲದೇವ ಇಚ್ಛೆಯಲಿ ಮಗಳಿತ್ತ
ಕೆಚ್ಚೆದೆಯ ವೀರ ಬಸವಗೆ । ಕಲ್ಯಾಣ
ನೆಚ್ಚಿ ಸಲಹೆಂದು ಕೈ ಮುಗಿದು ॥

ಅರಸ ಬಿಜ್ಜಳರಾಯ ಮರೆತಂದು ಕುಲಮತವ
ಕರೆಸಿ ಬಸವನಿಗೆ ಒಪ್ಪಿಸಿದ । ಮಂತ್ರಿ ಪದ
ಹರುಷದಲಿ ರಾಜ ಮುದ್ರಿಕೆಯ ॥

ಸಾಗಿ ಬಸವನು ಬಂದು ತೂಗಿದನು ಕಲ್ಯಾಣ
ಹಾಗಿನಲಿ ಕಟ್ಟಿ ಅನುಭವ । ಮಂಟಪದ
ಕೂಗು ಕೇಳುತಲಿ ಜನವೆದ್ದು ॥

ಕೂಡಿದರು ಹುರುಪಿನಲಿ ನಾಡ ಬಲ್ಲಿದರೆಲ್ಲ
ಸೂಡ ಕಟ್ಟಿದರು ಶಿವ ನುಡಿಯ  ಕಾಯಕದ
ಗೂಡಾತು ಲೋಕ ಜನಹಿಗ್ಗಿ ॥

ಅರ್ಪಣೆಯು ಅನುಭಾವ ಹೆಪ್ಪುಗಟ್ಟಿತು ಲೋಕ
ಬೆಪ್ಪಾತು ನಾಕ ಕಾಯಕದ ಹಾಲ್ಗೊಳೆಯ
ತೆಪ್ಪ ದಾಸೋಹ ತೇಲುತಲಿ ॥

ಹೊಲೆಯ ಮಾದಿಗರೆಂಬ ಬಲೆಯಾತ ಕಿತ್ತೊಗೆದ
ಭಲರೆ ಬಸವಯ್ಯ ಬಸವರಸ । ನಿನ್ನುಸುರು
ನೆಲೆಯಾತು ನಿತ್ಯ ಜನಪದಕೆ ॥

ಹರಹರನೆ ವರಸಂಗ ಗುರು ಎನಗೆ ವರಸಂಗ
ಕರುಣನಿಧಿ ಹರನೆ ಸಂಗಮನೆ । ಎಂದೆನುತ
ಕರ ಮುಗಿದ ಬಸವ ಬಯಲಾದ ॥

ಮಲ್ಲೀಗಿ ಇದ್ದಾಗ ಮುಳ್ಳೇಕೆ ಮುಡಿಯುತೀ
ಕಲ್ಯಾಣದಲ್ಲಿ ಬಸವಯ್ಯ ಇದ್ದಾಗ
ಕಲ್ಲೇಕೆ ಕೈಯ ಮುಗಿಯುವೆ ॥

# ಅನುಬಂಧ – ೦೨

## ಬಸವಣ್ಣನನ್ನು ಕುರಿತಾದ ಕನ್ನಡದ ಪ್ರಮುಖ ನಾಟಕ ಕೃತಿಗಳು

೦೧. ಅಮರಶಾಸ್ತ್ರೀ ಹಿರೇಮಠ ಲಿಂಗಸೂಗೂರು:ಸಂಗೀತ ಬಸವೇಶ್ವರನಾಟಕ:೧೯೧೧
೦೨. ಬಳೂರ್.ಬಿ.ಸಿ, ಬಸವೇಶ್ವರ : ೧೯೧೮
೦೩. ಬಸವಗೌಡ ಅಣ್ಣಾ ಪಾಟೀಲ ಮತ್ತು ಹಿರೇಮಠ ಅದರಗುಂಚಿ:ಬಸವೇಶ್ವರ ನಾಟಕ:೧೯೨೦
೦೪. ಕೃಷ್ಣರಾಯ.ಅ.ನ:ಜಾತಿಹೀನನ ಮನೆಯ ಜ್ಯೋತಿ:೧೯೩೮
೦೫. ಶರಣ:ಕಲ್ಯಾಣವಾಣಿ ನಾಟಕ:ಸರಳ ರಗಳೆ:೧೯೩೯
೦೬. ದ.ರಾ.ಬೇಂದ್ರೆ, ತಲೆದಂಡ: ೧೯೪೧
೦೭. ಪುರಾಣಿಕ ಸಿದ್ಧಯ್ಯ:ಆತ್ಮಾರ್ಪಣ:೧೯೪೨
೦೮. ಕೃಷ್ಣರಾಯ ಅ.ನ: ಜಗಜ್ಯೋತಿ ಬಸವೇಶ್ವರ:೧೯೪೯.
೦೯. ಬೆಳ್ಳಾವೆ ನರಹರಿಶಾಸ್ತ್ರಿ:ಮಹಾತ್ಮಾ ಬಸವೇಶ್ವರ:೧೯೫೧
೧೦. ಪುಟ್ಟರಾಜ ಗವಾಯಿ:ಭಕ್ತಿ ರಸರಸಾಲ ಭಗವಾನ್ ಬಸವೇಶ್ವರ:೧೯೫೬
೧೧. ಕರಡಿ ವಿ.ಕೆ:ಕಾರಣಿಕ ಬಸವ ಮತ್ತು ಕಾಯಕ ವೈಭವ:೧೯೫೬
೧೨. ಭೂಸನೂರಮಠ:ಭಕ್ತಿ ಭಂಡಾರಿ ಮತ್ತು ಇತರ ನಾಟಕಗಳು:೧೯೫೮
೧೩. ಗುಗ್ರಿ ನೀ.ವ:ವಿಶ್ವಜ್ಯೋತಿ ಬಸವಣ್ಣನವರು:೧೯೬೪
೧೪. ಮಹಾಂತೇಶಶಾಸ್ತ್ರಿ ಎಚ್.ಟಿ:ಧರ್ಮಜ್ಯೋತಿ ಬಸವೇಶ್ವರ:೧೯೬೬
೧೫. ಹೆಚ್.ಎಸ್.ಶಿವಪ್ರಕಾಶ್:ಮಹಾಚೈತ್ರ:೧೯೬೮
೧೬. ಚಂದ್ರಯ್ಯ:ಬಸವೇಶ್ವರ ಐತಿಹಾಸಿಕ ನಾಟಕ:೧೯೬೯
೧೭. ಶ್ರೀಕಂಠಶಾಸ್ತ್ರಿ ನಲವಡಿ:ಜಗಜ್ಯೋತಿ ಬಸವೇಶ್ವರ ನಾಟಕ:೧೯೭೩
೧೮. ಚನ್ನಬಸಪ್ಪ ಗೋ.ರು:ಜಗಜ್ಯೋತಿ ಬಸವೇಶ್ವರ:೧೯೮೦
೧೯. ಕರಿಬಸವಯ್ಯ ಬಿ.ಎಸ್:ವಿಶ್ವಧರ್ಮಿ ಬಸವಣ್ಣ ಐತಿಹಾಸಿಕ ನಾಟಕ:೧೯೮೨
೨೦. ಪಿ.ಲಂಕೇಶ್:ಸಂಕ್ರಾಂತಿ:೧೯೮೫
೨೧. ಕೊಟ್ರೇಶ ಎಸ್.ಎಂ:ಕಾರ್ತಿಕ:೧೯೮೭
೨೨ ಲಠ್ಠೆ ಮಲ್ಲಿಕಾರ್ಜುನ:ಬಸವ ವಿಜ ದೊಡ್ಡಾಟ:೧೯೮೯
೨೩. ಗಿರೀಶ್ ಕಾರ್ನಾಡ್:ತಲೆದಂಡ:೧೯೯೦
೨೪. ಲಕ್ಷ್ಮಳ:ಕಾರಣಿಕ ಶಿಸು:೧೯೯೩
೨೫. ಕಲಬುರ್ಗಿ ಎಂ.ಎಂ:ಕೆಟ್ಟಿತ್ತು ಕಲ್ಯಾಣ : ೧೯೯೫
೨೬. ಚಂದ್ರಶೇಖರ ಕಂಬಾರ:ಶಿವರಾತ್ರಿ :೨೦೧೧

## ಆಕರ ಗ್ರಂಥಗಳು


೧. ದ.ರಾ.ಬೇಂದ್ರೆ. ೨೦೦೮. **ತಲೆದಂಡ.** ಶ್ರೀಮಾತಾ ಪ್ರಕಾಶನ,ಗೋಕುಲ ರಸ್ತೆ,ಹುಬ್ಬಳ್ಳಿ.

೨. ಎಂ.ಆರ್.ಶ್ರೀನಿವಾಸಮೂರ್ತಿ. ೧೯೮೧. **ಭಕ್ತಿಭಂಡಾರಿ ಬಸವಣ್ಣನವರು.** ಗೀತಾಬುಕ್ ಹೌಸ್ ಮೈಸೂರು.

೩. ಕೆ.ಎಲ್.ನರಸಿಂಹಶಾಸ್ತ್ರಿ. ೧೯೭೭. **ಭರತಮುನಿ ವಿರಚಿತ ನಾಟ್ಯಶಾಸ್ತ್ರ.** ಶ್ರೀ ಶಂಕರಾ ಪ್ರಿಂಟಿಂಗ್ ವರ್ಕ್ಸ್,ಜಯನಗರ, ಬೆಂಗಳೂರು.

೪. ಗಿರೀಶ ಕಾರ್ನಾಡ. ೧೯೯೦. **ತಲೆದಂಡ.** ಮನೋಹರ ಗ್ರಂಥಮಾಲಾ,ಸುಭಾಸರೋಡ ಧಾರವಾಡ.

೫. ಪಿ.ಲಂಕೇಶ್. ೧೯೮೬. **ಸಂಕ್ರಾಂತಿ.** ನೆಲಮನೆ ಪ್ರಕಾಶನ, ಮೈಸೂರು

೬. ಚಂದ್ರಶೇಖರ ಕಂಬಾರ. ೨೦೧೧. **ಶಿವರಾತ್ರಿ** ಅಂಕಿತ ಪುಸ್ತಕ .ಬಸವನ ಗುಡಿ, ಬೆಂಗಳೂರು.


## ಪರಾಮರ್ಶನ ಗ್ರಂಥಗಳು


೧. ದ.ರಾ.ಬೇಂದ್ರೆ. ೧೯೭೪. **ಸಾಹಿತ್ಯದ ವಿರಾಟ್ ಸ್ವರೂಪ.** ಸಮಾಜ ಪುಸ್ತಾಕಾಲಯ, ಧಾರವಾಡ.

೨. ತ.ಸು.ಶಾಮರಾಯ. ೨೦೧೦ (ಪರಿಷ್ಕೃತ) **ಕನ್ನಡ ಸಾಹಿತ್ಯ ಚರಿತ್ರೆ** ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

೩. ಡಾ.ಎಚ್.ಕೆ.ರಂಗನಾಥ್. ೧೯೭೮. **ಕರ್ನಾಟಕ ರಂಗಭೂಮಿ.** ಸುರಚಿ ಪ್ರಕಾಶನ, ಸರಸ್ವತಿ ಪುರ, ಮೈಸೂರು.

೪. ಪಿ.ವಿ.ಶಾಸ್ತ್ರೀ. ೧೯೯೧. **ಸಾಹಿತ್ಯದ ಪ್ರಕಾರಗಳು,** ಪ್ರತಿಭಾ ಗ್ರಂಥಮಾಲೆ, ಧಾರವಾಡ.

೫. ಕೆ.ಶಿವರಾಮ ಕಾರಂತ. ೧೯೬೩. **ಯಕ್ಷಗಾನ ಬಯಲಾಟ.** ಹರ್ಷಮುದ್ರಾಣಾಲಯ, ಪುತ್ತೂರು.

೬. ಹಾಲತಿ ಸೋಮಶೇಖರ. ೧೯೯೬. **ಸಾಯೋ ಆಟ – ಒಂದು ಅಧ್ಯಯನ** ಅಖೀಲಾ ಏಜನ್ಸೀಸ್,ಮೈಸೂರು..

೭. ಡಾ.ಶ್ರೀರಂಗ. (ಸಂ) ೧೯೮೭. **ಕನ್ನಡ ರಂಗಭೂಮಿ ನಡೆದು ಬಂದ ದಾರಿ** ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

೭. ಎಮ್.ಟಿ.ಧೂಪದ. ೧೯೮೭. **ಉತ್ತರ ಕರ್ನಾಟಕದ ಜಾನಪದ ರಂಗಭೂಮಿ.** ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜ ಪೇಟೆ, ಬೆಂಗಳೂರು.

೮. ಡಾ.ಸಾ.ಶಿ.ಮರುಳಯ್ಯ. ೧೯೮೭. **ಪರ್ವತವಾಣಿಯವರ ನಾಟಕಗಳು : ಒಂದು ಸಮೀಕ್ಷೆ** ಕನ್ನಡ ಸಾಹಿತ್ಯ ಪರಿಷತ್ತು,ಬೆಂಗಳೂರು.

೯. ಪ್ರೊ.ಬಿ.ವಿರೂಪಾಕ್ಷಪ್ಪ. (ಸಂ) ೨೦೦೦. **ವಿಶ್ವಜ್ಯೋತಿ ಬಸವಣ್ಣನವರು** ಬಸವ ಸಮಿತಿ, ಬಸವೇಶ್ವರ ವೃತ್ತ ಬೆಂಗಳೂರು.

೧೦. ಡಾ.ಬಿ.ಸಿ.ಜವಳಿ. ೧೯೩೫. **ಬಸವಣ್ಣನವರ ಯೋಜನೆಗಳು.** ಕರ್ನಾಟಕ ವಿ.ವಿ. ಧಾರವಾಡ.

೧೧. ಎಂ.ಆರ್.ಶ್ರೀನಿವಾಸಮೂರ್ತಿ. ೧೯೮೧. **ಭಕ್ತಿಭಾಂಡಾರಿ ಬಸವಣ್ಣನವರು.** ಗೀತಾಬುಕ್ ಹೌಸ್, ಮೈಸೂರು.

೧೨. ಡಾ.ಸುಮತೀಂದ್ರ ನಾಡಿಗ. ೧೯೯೪. **ಬೇಂದ್ರೆ ಕಾವ್ಯದಲ್ಲಿ ವಿಭಿನ್ನ ನೆಲೆಗಳು.** ಕರ್ನಾಟಕ ಬುಕ್ ಏಜೆನ್ಸಿ , ಗಾಂಧಿನಗರ, ಬೆಂಗಳೂರು.

೧೩. ದ.ರಾ.ಬೇಂದ್ರೆ. ೧೯೩೭ **ಸಾಹಿತ್ಯ ಮತ್ತು ವಿಮರ್ಶೆ.** ಜಿ.ಬಿ.ಜೋಶಿ,ಮನೋಹರ ಗ್ರಂಥಮಾಲ, ಧಾರವಾಡ.

೧೪. ಎನ್ಕೆ ಕುಲಕರ್ಣಿ. ೧೯೯೧. **ಕನ್ನಡ ಸಾಹಿತ್ಯದಲ್ಲಿ ದ.ರಾ.ಬೇಂದ್ರೆಯವರ ಸ್ಥಾನಮಾನ.** ನಿರ್ದೇಶಕರು, ಪ್ರಸಾರಾಂಗ, ಕ.ವಿ.ವಿ.ಧಾರವಾಡ

೧೫. ಎನ್ಕೆ ಕುಲಕರ್ಣಿ. ೨೦೦೦. **ಧಾರವಾಡದ ದತ್ತೂಮಾಸ್ತರ.** ಅಮೋಘವಾಙ್ಮಯ ಪ್ರಸಾರ, ಬೆಳಗಾವಿ

೧೬. ಡಾ.ಬಿ.ವಾಯ್.ಪಾಟೀಲ. ೨೦೦೧. **ಕನ್ನಡ ಆಧುನಿಕ ನಾಟಕಗಳಲ್ಲಿ ಬಸವಪುರಾಣ.** 'ಬೆಳಕು' ಪ್ರಕಾಶನ ಹರಿಹರ.

೧೭. ಬುದ್ದಣ್ಣ ಹಿಂಗಮಿರೆ. (ಸಂ) ೧೯೭೭. **ಇಳಿದು ಬಾ ತಾಯಿ.** ಶ್ರೀ ಬೇಂದ್ರೆ ಅಭಿನಂದನ ಗ್ರಂಥ. ಮನೋಹರ ಘಾಣೇಕರ.ಸಮಾಜ ಪುಸ್ತಕಾಲಯ, ಧಾರವಾಡ.

೧೮. ಸಂಪಾದಕರು ಪ್ರೋ.ಬಿ.ವಿರೂಪಾಕ್ಷಪ್ಪ–**ಬಸವಪಥ**–ಬಸವ ಸಮಿತಿ. ಬಸವೇಶ್ವರ ವೃತ್ತ ಬೆಂಗಳೂರು.

೧೯. ಡಾ.ದೇ.ಜವರೇಗೌಡ – **ಎನ್ನತಂದೆ ಕೂಡಲಸಂಗಮ** – ಪವಾಡಗಳ ಹಿನ್ನೆಲೆಯಲ್ಲಿ ಬಸವರಾಜದೇವರ ರಗಳೆ.

